ಬೆಲೆ : ಎರಡು ಆಣೆ

ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ
ತರಿಸಿಕೊಂಡಲ್ಲಿ ೬ ಆಣೆ
ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
DEC. 30
1946

ಸಂಪಾದಕರು :
ಹ. ರಾ. ಪುರೋಹಿತ, ಎಂ. ಎ.

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

[ Editor H. R. Purohit, M. A.

ಸಂಪುಟ ೧೮ ] ಹುಬ್ಬಳ್ಳಿ ಸೋಮವಾರ ತಾರೀಖು ೩೦ — ೧೨ — ೧೯೪೬ [ ಸಂಚಿಕೆ ೩೬

ಭಾಗಲಪುರ ಸೆರೆಮನೆಯಿಂದ

# ಜಯಪ್ರಕಾಶರ ಪಲಾಯನದ ಆಖ್ಯಾನ

## ನೇಪಾಲದಲ್ಲಿ "ವಿಮೋಚನ ಸೈನ್ಯ"ದ ಸಂಘಟನೆ

## ಬ್ರಿಟಿಶ ಮತ್ತು ನೇಪಾಲ ಪೋಲೀಸರಿಗೆ ಮಂಕುಬೂದಿ

[ ಶ್ರೀ ಪುರುಷೋತ್ತಮದಾಸ ಟಂಡನರಿಂದ ]

೧೯೪೨ ರಲ್ಲಿ ಬಂಧಿಸಲ್ಪಟ್ಟು ಭಾಗಲಪುರ ಸೆರೆಮನೆಯಲ್ಲಿರಿಸಲಾದ ಹಿಂದೀ ಸಾಮ್ಯವಾದಿ ಜಯಪ್ರಕಾಶರು ದೀಪಾವಳಿಯ ಬೆಳಕಿನ ದಿನದಲ್ಲಿ ಸೆರೆಮನೆಯಿಂದ ಪಾರಾಗಿ ಹೋದ ಅದ್ಭುತ ಸಂಗತಿ ಎಲ್ಲರಿಗೂ ಗೊತ್ತು. ಆದರ ಪೂರ್ಣ ವಿವರವನ್ನು ಕಣ್ಮರೆಯಾದ ಕಾಲದಲ್ಲಿ ಅವರು ನಡೆಸಿದ ಕೆಲಸವನ್ನೂ ಮುಂದೆ ಅವರ ಬಂಧನವಾದ ಪ್ರಸಂಗವನ್ನೂ ಅಧಿಕೃತವಾಗಿ ಅವರಿಂದಲೇ ತಿಳಿದು ಶ್ರೀ ಟಂಡನ್ನರು ಪ್ರಕಟಿಸಿದ್ದಾರೆ. ಜಯಪ್ರಕಾಶರ ವ್ಯಕ್ತಿತ್ವ ಎಲ್ಲರನ್ನೂ ಮೋಹಿಸಿದೆ. ಅವರ ಪಲಾಯನದ ಆಖ್ಯಾನ ಕುತೂಹಲಪ್ರದವಾಗುವದು.

ದೀಪಾವಳಿಯ ರಾತ್ರಿ, ಹಜಾರಿಬಾಗದ ಸೆರೆಮನೆಯಲ್ಲಿ ನೂರಾರು ಹಣತೆಗಳು ಉಜ್ವಲವಾಗಿ ಉರಿಯುತ್ತಿದ್ದಾಗ ಅಲ್ಲಿಂದ ತಪ್ಪಿಸಿಕೊಂಡು ಹೋದದ್ದು ಜಯಪ್ರಕಾಶರ ದಿಟ್ಟತನದ, ಪ್ರಶಾಂತ ಸಾಹಸ ಹಂಚಿಕೆಯ, ಅದಕ್ಕೂ ಹೆಚ್ಚಾಗಿ ಅವರ ಚಮತ್ಕಾರಪ್ರಿಯತೆಯ ನಿದರ್ಶನವಾಗಿತ್ತು.

ಜಯಪ್ರಕಾಶ ನಾರಾಯಣರು ಸೆರೆಮನೆಯಿಂದ ಪಾರಾದುದು, ಅವರ ಗುಪ್ತ ಚಟುವಟಿಕೆ ಮತ್ತು ಪುನರ್ಬಂಧನ ಇವುಗಳು ಅಪೂರ್ವ ಧೈರ್ಯ, ಮಹಾಸಾಹಸ, ಕ್ಲೇಶಸಹನೆ, ದುಃಖಗಳ ಕಥೆಯಾಗಿದೆ! ಅದರಲ್ಲಿ ನಾಟಕೀ ಸನ್ನಿವೇಶಗಳೂ ಇರುತ್ತಿದ್ದವು. ಅವರ ಅಶಾಂತ ಜೀವ ಸುಮ್ಮನೆ ಬಿದ್ದಿರಲು ಒಡಂಬಡಲಿಲ್ಲ. ಹೊರಗೆ ಲಕ್ಷಾಂತರ ಜನರು ಕೈಕೊಂಡಿದ್ದ ಜೀವನ ಮರಣಗಳ ಹೋರಾಟದಲ್ಲಿ ಭಾಗವಹಿಸಲೆಂದು ಬಂಧನದಿಂದ ಓಡಿಹೋಗುವ ವಿಚಾರವನ್ನು ಅವರು ಮಾಡಿದರು.

ಒಂದು ದಿನ ನಾನು ಅಲಹಾಬಾದಿನಿಂದ ಬನಾರಸದ ವರೆಗೆ ಜಯಪ್ರಕಾಶರ ಸಂಗಡ ಪ್ರವಾಸ ಮಾಡಿದೆ. ಆಗ ಆ ಪಲಾಯನದ ಕಥೆಯನ್ನು ಹೇಳಬೇಕೆಂದು ಅವರನ್ನು ಒತ್ತಾಯಗೊಳಿಸಿದೆ.

"ಅದೆಲ್ಲ ನನ್ನ ಸ್ವಂತದ ವಿಚಾರ. ಜಗತ್ತಿನಲ್ಲಿ ಅದನ್ನು ನಾನೆ ಪ್ರಚಾರ ಮಾಡುವದು ಚನ್ನಾಗಿರುವದಿಲ್ಲ" ಎಂದರವರು.

"ಸಾವಿರಾರು ದೇಶಬಾಂಧವರು ಇಷ್ಟು ಬಿಗಿಯಾದ ಕಾವಲಿನ ನಡುವೆ ನೀವು ಪಾರಾದ ಬಗೆಯನ್ನು ಅರಿಯಲು ಆತುರಪಡುತ್ತಾರೆ. ಅದರ ಕಥೆಯನ್ನು ಅರಿತು ಕೌತುಕಪಡುವ ಆನಂದದಿಂದ ಅವರನ್ನು ವಂಚಿಸುವದು ಸರಿಯಲ್ಲ."

ನನ್ನ ಒತ್ತಾಸೆಗೆ ಅವರು ಒಪ್ಪಿದರು.

### ಕಾರಿರುಳಿನಲ್ಲಿ

ರಾತ್ರಿ ಅಂಧಕಾರಮಯವಾಗಿತ್ತು. ತಾರೆಗಳು ಮಿನುಗುತ್ತಿದ್ದವು. ಆ ನೀರವ ನಿಶೀಥದಲ್ಲಿ ಜಯಪ್ರಕಾಶ, ಜೋಗೇಂದ್ರ ಶುಕ್ಲ, ರಾಮನಂದನ ಮಿಶ್ರ, ಸುರಾಜ ನಾರಾಯಣ ಸಿಂಗ, ಗುಲಾಬಚಂದ ಗುಪ್ತ, ಸಾಲಿಗ್ರಾಮ ಸಿಂಹ ಈ ಆರು ಜನ "ಯುದ್ಧ ಕೈದಿಗಳು" ಬಿಡುಗಡೆ ಹೊಂದಿ ಕನಸು, ಹಂಚಿಕೆ, ಕ್ಲೇಶ, ಹೋರಾಟಗಳ ರಾಜ್ಯದಲ್ಲಿ ಕಾಲಿಟ್ಟರು.

ಜಯಪ್ರಕಾಶರು ಸುಮಾರು ಹತ್ತು ಜನರನ್ನು ಒಳಸಂಚಿನಲ್ಲಿ ತೆಗೆದುಕೊಂಡಿದ್ದರು. ಅವರಲ್ಲಿ ಓಡಿ ಹೋಗಬೇಕಾದವರು ಆರು ಜನ; ಉಳಿದ ನಾಲ್ವರು ಈ ಪಲಾಯನದ ಮೇಲ್ವಿಚಾರಣೆ ನಡೆಸಬೇಕಾಗಿತ್ತು. ದಿನ ಬೆಳಗಾದರೆ ಅವರು ತಮ್ಮ ಈ ಹಂಚಿಕೆಯ ಪ್ರಯೋಗ ನಡೆಸುತ್ತಿದ್ದರು. ಯೋಜನೆ ಪರಿಪೂರ್ಣವಾಯಿತೆಂದು ಖಚಿತವಾದ ಮೇಲೆ ಅವರು ತಪ್ಪು ತಡೆಗಳ ಸಂಭವವನ್ನೆಲ್ಲ ನಿವಾರಿಸುವ ವ್ಯವಸ್ಥೆ ಮಾಡಿ ತಮ್ಮ ಗೆಳೆಯರನ್ನು ದೀಕ್ಷೆಗೊಂಡರು. ಅದರ ಪ್ರಯೋಗ ನಡೆಸುತ್ತಿದ್ದಾಗ ಅಷ್ಟು ಜನರಿಗೆ ಓಡಿ ಹೋಗಲು ಕಡಿಮೆಯೆಂದರೆ ಹತ್ತು ನಿಮಿಷ ಹಿಡಿದೀತೆಂದು ಎಣಿಸಲಾಗಿತ್ತು. ಆದರೆ ನಿಜವಾಗಿ ಇದಿ ಹಂಚಿಕೆಗೆ ಎಂಟು ನಿಮಿಷಗಳೆ ಸಾಕಾದವು, ಎಂದು ಜಯಪ್ರಕಾಶರು ನನಗೆ ಹೇಳಿದರು. ಸೆರೆಮನೆಯಿಂದ ಹೊರಬೀಳುವ ಮೊದಲು ಅವರು ತಮ್ಮ ಹಾಸಿಗೆಗಳನ್ನು ಅಣಿಗೊಳಿಸಿ, ಮೇಲೆ ಸೊಳ್ಳೆ ಪರದೆಯನ್ನು ಕಟ್ಟಿ ಕಂಬಳಿ ಬಿಚ್ಚಿ ಹಾಸಿಟ್ಟು ತಾವು ನಿದ್ದೆ ಹೋಗಿರುವೆವೆಂಬ ಭಾವನೆ ಹುಟ್ಟುವಂತೆ ಮಾಡಿದ್ದರು. ಒಂದು ಮೇಜನ್ನು ಗೋಡೆಗೆ ಆನಿಸಿ ಇಟ್ಟು, ಧೋತರಗಳಿಂದ ಮಾಡಿದ ಹಗ್ಗವನ್ನು ಸೆರೆಮನೆಯ ಗೋಡೆಯ ಮೇಲೆ, ಅರ್ಧ ಹೊರಗೆ ಅರ್ಧ ಒಳಗೆ ಜೋತಾಡುವಂತೆ ಒಗೆಯಲಾಗಿತ್ತು. ವಾರ್ಡರನನ್ನು ಮೋಸಗೊಳಿಸಲು ಅವನೊಡನೆ ಕೆಲವರು ಹರಟೆ ಹೊಡೆಯುತ್ತ ಅವನ ಲಕ್ಷ್ಯ ತಿರುಗಿಸಬೇಕೆಂದು ಗೊತ್ತಾಗಿತ್ತು. ಅದೆಲ್ಲ ಹಂಚಿಕೆಗೆ ಸರಿಯಾಗಿಯೆ ನಡೆಯಿತು. ವಾರ್ಡರನು ಹೊಗೆಬತ್ತಿ ಸೇದುತ್ತ ಇತರ ಕೈದಿಗಳೊಡನೆ ಹರಟೆ ಕೊಚ್ಚುತ್ತಿದ್ದಂತೆ, ಜಯಪ್ರಕಾಶರೂ ಅವರ ಸಂಗಡಿಗರೂ ಗೋಡೆಯನ್ನು ಹತ್ತಿದರು. ಇದಕ್ಕಾಗಿ ಅವರು ಉಪಯೋಗಿಸಿದ ನಿಚ್ಚಣಿಕೆ ವಿಚಿತ್ರವಾಗಿತ್ತು. ಮೇಜಿನ ಮೇಲೆ ಒಬ್ಬ ಮನುಷ್ಯನು ಬಗ್ಗಿ ನಿಲ್ಲಬೇಕು, ಅವನ ಬೆನ್ನೇರಿ ಪಾರಾಗುವವರು ಗೋಡೆ ಹತ್ತಬೇಕು.

### ಅಡವಿಯಲ್ಲಿ ಪಯಣ

ಧೋತರ, ಅಂಗಿಗಳ ಬದಲು ಶರ್ಟು-ಚಣ್ಣಗಳನ್ನು ಧರಿಸುವದಾಯಿತು. ಒಂದು ಧೋತರ ಒಂದಿಷ್ಟು ಬೇಳೆ, ಸ್ವಲ್ಪ ರೊಕ್ಕ ಇವಿಷ್ಟನ್ನು ಗಂಟುಕಟ್ಟಿ ಪ್ರಯಾಣಕ್ಕೆ ಸಿದ್ಧಮಾಡಿಡಲಾಗಿತ್ತು ಆದರೆ ಓಡಿಹೋಗುವ ಅವಸರದಲ್ಲಿ ಈ ಬಂದಿಗಳು ಆ ಗಂಟನ್ನು ಮರೆತೇಬಿಟ್ಟರು. ಗೋಡೆ ಹಾರಿ ಜೊಲಕ್ಕಿಳಿದು ಅಡವಿಯನ್ನು ಹೊಕ್ಕರು. ಅಲ್ಲಿಯೂ ಅವರು ತುಟಿ ಪಿಟಕ್ಕೆನ್ನಲಿಲ್ಲ, ಒಂದಿಷ್ಟು ಸದ್ದು ಮಾಡಲಿಲ್ಲ. ಇರುಳೆಲ್ಲ ನಡೆದರು. ಕಲ್ಲು ಮುಳ್ಳುಗಳಿಂದ ತುಂಬಿದ್ದ ದಾರಿಯಲ್ಲಿ ಬರಿಗಾಲಲ್ಲಿ ನಡೆದು ಹೋಗಲು ಜಯಪ್ರಕಾಶರಿಗೆ ಬಹಳ ಕಷ್ಟವಾಯಿತು. ಅಡವಿಯಲ್ಲಿ ಇಪ್ಪತ್ತನಾಲ್ಕು ತಾಸು ನಡೆದ ಮೇಲಂತೂ ಅವರ ಹಳೆಯ ಟೊಂಕಸೋವು ಬಹಳ ಹೆಚ್ಚಿಕೊಂಡಿತು. ಆಗಾಗ ದಾರಿಯಲ್ಲಿ ತಡೆಯಬೇಕಾಗುತ್ತಿತ್ತು. ಒಮ್ಮೊಮ್ಮೆ ಸಂಗಡಿಗರಾದ ಸಾಲಿಗ್ರಾಮ ಹಾಗು ಶುಕ್ಲರು ಅವರನ್ನು ಬೆನ್ನಮೇಲೆ ಹೊತ್ತುಕೊಂಡು ಹೋಗುತ್ತಿದ್ದರು. ಝರಖಂಡ ಅಡವಿಯನ್ನು ದಾಟಿ ಹೋಗಬೇಕಾದರೆ ಅವರಿಗೆ ಮೂರು ದಿನ ಹಿಡಿಯಿತು. ಅಷ್ಟು ಕಾಲವೂ ಅವರಿಗೆ ಹೆಚ್ಚು ಕಡಿಮೆ ನಿರಾಹಾರವೆ. ಒಮ್ಮೊಮ್ಮೆ ಅಡವಿಯ ಹಣ್ಣುಗಳಾದ ಕಾಳಿ, ಬೇರಿ ಮೊದಲಾದವುಗಳು ಸಿಗುತ್ತಿದ್ದವು. ಮಲಗಲು ಏನೊಂದೂ ಇರಲಿಲ್ಲ. ರಾತ್ರಿಯಲ್ಲಿ ದಾರಿಯಿಂದ ದೂರ ಹೋಗಿ ಯಾವುದಾದರೂ ಮರದ ಕೆಳಗೆ ಮಲಗುತ್ತಿದ್ದರು ಚಳಿಯಾದರೆ ತರಗೆಲೆ, ಒಣ ಟೊಂಗೆಗಳನ್ನು ಶೇಖರಿಸಿ ಬೆಂಕಿ ಮಾಡಿಕೊಳ್ಳುತ್ತಿದ್ದರು. ಒಂದಿನಿಸು ನಿದ್ದೆ ತೆಗೆದು ಮತ್ತೆ ಬಿಡುಗಡೆಯ ದಾರಿಯಲ್ಲಿ ಮುಂದೋಟ. ಅಡವಿಯಿಂದ ಹೊರಬಂದಬಳಿಕ ಅವರು ಇಬ್ಭಾಗವಾಗಿ ನಿರ್ದಿಷ್ಟ ಕಾರ್ಯಗಳಿಗಾಗಿ ಬೇರೆ ಬೇರೆ ಕಡೆಗೆ ಹೊರಟುಹೋದರು.

### ಅಧಿಕಾರಿಗಳ ಗಾಬರಿ

ಅಧಿಕಾರಿಗಳಿಗೆ ಈ ಆರು ಸ್ವಾತಂತ್ರ್ಯ ಪಕ್ಷಿಗಳು ಹಾರಿಹೋದ ಸಂಗತಿ ಗೊತ್ತಾದುದು ಮರುದಿನ ಮುಂಜಾನೆ ಹತ್ತುಗಂಟೆಗೆ. ಅಷ್ಟರಲ್ಲಿ ಇವರು ಎಷ್ಟೋ ದೂರ ಸಾಗಿಬಿಟ್ಟಿದ್ದರು. ವಾರ್ಡರರು ಗಡಬಡಿಸಿ ಎದ್ದು ಅಲ್ಲಲ್ಲಿ ಹುಡುಕಾಡಿದರು; ಹುಚ್ಚರಂತೆ ಯದ್ವಾತದ್ವಾ ಓಡಾಡಿದರು. ಜಿಲ್ಲಾಧಿಕಾರಿಗಳು ಓಡಿ ಬಂದರು. ಪ್ರಾಂತಿಕ ಅಧಿಕಾರಿಗಳಿಗೆ ಸಂಗತಿಯನ್ನು ತಿಳಿಸುವದಾಯಿತು. ಪೋಲೀಸ ಕಾವಲುಗಾರರು ಓಡಿಪವರನ್ನು ಹಿಡಿಯಲು ಅಡವಿಯೆಲ್ಲ ಸುತ್ತಿದರು. ವಿಮಾನ ಮೂಲಕ ಪರಿಶೋಧನೆ ಕೂಡ ಆಯಿತು. ಆದರೆ ಅಷ್ಟರಲ್ಲಿ ಜಯಪ್ರಕಾಶರು ಗಂಡಾಂತರದ ಸೀಮೆಯನ್ನು ದಾಟಿ ಹೋಗಿದ್ದರು. ನೌಕರಶಾಹಿಗೂ ಜಯಪ್ರಕಾಶರಿಗೂ ಆದ ಶಕ್ತಿಪರೀಕ್ಷೆಯಲ್ಲಿ ಜಯಪ್ರಕಾಶರೇ ಗೆದ್ದರು, ಅಧಿಕಾರಿಗಳು ಬಿದ್ದರು.

ಜಯಪ್ರಕಾಶರ ಓಟದ ನಂತರ ಸೆರೆಮನೆಯ ಅಧಿಕಾರಿಗಳು ಬಹಳ ನಿಷ್ಠುರರಾದರು. ಉಳಿದ ಗೆಳೆಯರು ಹಲಬಗೆಯ ಛಲನೆಗೊಳಗಾಗಬೇಕಾಯಿತು. ಜಯಪ್ರಕಾಶರ ಹೆಂಡತಿ ಪ್ರಭಾದೇವಿ ಇನ್ನೊಂದು ಸೆರೆಮನೆಯಲ್ಲಿದ್ದರು. ಈ ಪಲಾಯನದ ನಂತರ ಅವರನ್ನು ಕೋಣೆಯಿಂದ ಹೊರಗೆ ಮಲಗಗೊಡುತ್ತಿರಲಿಲ್ಲ. ಅಧಿಕಾರಿಗಳಿಗೆ ಗಾಬರಿಯಾಗಿಬಿಟ್ಟಿತ್ತು.

### ಹಳ್ಳಿಗನ ಸೋಗಿನಲ್ಲಿ

ಗಯಾ, ಆರಾಗಳನ್ನು ದಾಟಿ ಜಯಪ್ರಕಾಶರು ಕಾಶಿಯನ್ನು ಸೇರಿದರು. ಅಲ್ಲಿ ಅವರು ಕೆಲ ಗೆಳೆಯರೊಡನೆ ಸಂಪರ್ಕ ಬೆಳೆಸಿದರು. ಅಡವಿಯಿಂದ ಕಾಶಿಗೆ ಮುಟ್ಟಬೇಕಾದರೆ ೧೫ ದಿನ ಹಿಡಿಯಿತು. ಪಯಣದ ಅಧಿಕಾಂಶ ಕಾಲಿಂದಲೆ ಆಯಿತು. ಆದರಿಂದ ಅವರ ಆರೋಗ್ಯಕ್ಕೆ ಅಷ್ಟಿಷ್ಟು ಧಕ್ಕೆಯಾಗಿತ್ತು. ಅವರು ಗಡ್ಡ ಬೆಳಸಿ ಆಗಾಗ್ಗೆ ಹಳ್ಳಿಗಳಿಗೆ ಹೋಗಿ ಬರುತ್ತಿದ್ದರು. ಪ್ರವಾಸ ಕಾಲದಲ್ಲಿ ಅವರು ಅಂಗಡಿಕಾರರೊಡನೆ ಉಳಿದುಕೊಂಡು ನದಿಯಲ್ಲಿ ಮೈ ತೊಳೆದುಕೊಳ್ಳುತ್ತಿದ್ದರು. ಅವರ ವೇಷ ಶುದ್ಧ ಹಳ್ಳಿಗನಂತಿರುತ್ತಿತ್ತು. ಕೈಲೊಂದು ಕೋಲು, ಮೊಣಕಾಲ ಮೇಲೆ ಮಡಿಚಿ ಉಟ್ಟ ಹೊಲಸು ದೋತರ, ಮಲಿನವಾದ ಅಂಗಿ, ತಲೆಗೊಂದು ಹೊಲಸು ಚಾದರು. ತಿಂಗಳುಗಟ್ಟಲೆ ಅಗಸನನ್ನು ಕಾಣದ ಅವರ ಬಟ್ಟೆಬರೆ ಒಮ್ಮೊಮ್ಮೆ ನಾರುತ್ತಿದ್ದವು. "ಹಳ್ಳಿಗರು ಕುತೂಹಲದಿಂದ ಎಲ್ಲ ಬಗೆಯ ಪ್ರಶ್ನೆಗಳನ್ನು ಕೇಳುತ್ತಿದ್ದರು," ಎಂದು ಅವರು ತಮ್ಮ ಕಷ್ಟಗಳನ್ನು ಬಣ್ಣಿಸಿದರು. "ಒಂದೊಂದು ಸಲವಂತೂ ನನಗೆ ಮುಂಗಾಣದಂತಾಗುತ್ತಿತ್ತು. ಅವರ ಪ್ರಶ್ನೆಗಳಿಗೆ ಉತ್ತರವೀಯುವದು ಯಾವಾಗಲೂ ಸುಲಭವಾಗಿರಲಿಲ್ಲ. ನನ್ನ ಉತ್ತರಗಳಿಂದ ಸಂಶಯವೆಲ್ಲಿ ಬರುವದೋ ಎಂದು ನನಗೆ ಭಯವಾಗುತ್ತಿತ್ತು."

ಪಟ್ಟಣದಿಂದ ಪಟ್ಟಣಕ್ಕೆ ಅಲೆದು, ಕಾರ್ಯಕರ್ತರೊಡನೆ ಸಂಪರ್ಕ ಬೆಳೆಸಿ ಆಗಸ್ಟ ಬಂಡಾಯದ ಜ್ವಾಲೆಯನ್ನು ಸದಾ ಉದ್ದೀಪ್ತವಾಗಿಡಲು ಅವರು ಹೆಣಗಾಡಿದರು. ಸುಮಾರು ಎರಡು ತಿಂಗಳ ನಂತರ ಅವರ ಗಡ್ಡ ಮಾಯವಾಗಿ ಯುರೋಪಿಯನ್ ಉಡುಪು ಬಂತು. ಒಂದೊಂದು ಸಲ ಮುಸ್ಲಿಂ ವೇಷ ಧರಿಸಿ "ರಹಮಾನ" ಆಗುತ್ತಿದ್ದರು. ಕ್ರಾಂತಿಕಾರ ಹಂಚಿಕೆ ಗತ್ತುಗಾರಿಕೆಗಳಲ್ಲಿ ಅಪ್ರತಿಮರಾಗಿದ್ದುದರಿಂದಲೇ ಪೋಲೀಸರಿಂದ ಅಷ್ಟು ದೀರ್ಘಕಾಲ ತಪ್ಪಿಸಿಕೊಂಡು ಕೆಲಸ ಮಾಡಲು ಅವರಿಗೆ ಸಾಧ್ಯವಾಯಿತು. ಸುಭಾಷ ಬೋಸರೂ ಅವರೂ

(೧೬ ನೆ ಪುಟಕ್ಕೆ)

# "ಡಿಡಿಟಿ"ಯು ಎಲ್ಲ ಕ್ರಿಮಿಕೀಟಗಳ ನಾಶಕವೊ ?

ಈಗ ಎಲ್ಲೆಡೆಗೂ ಮಲೇರಿಯಾ ಮೊದಲಾದ ರೋಗಗಳ ಹಬ್ಬುವಿಕೆಯ ಮೂಲವನ್ನೇ ನಾಶಗೊಳಿಸಬೇಕೆಂಬ ವಿಚಾರದಿಂದಲೂ ಇತರ ಸಣ್ಣ ಜೀವಿ ಜಂತುಗಳನ್ನು ನಾಶಮಾಡಬೇಕೆಂದೂ ಪ್ರಯೋಗಗಳು ನಮ್ಮ ದೇಶದಲ್ಲಿ ಸಾಗಿವೆ. ಈ ಕ್ರಿಮಿಕೀಟಗಳು ಸಮಾಜ ಘಾತಕವೆನ್ನಲಿಕ್ಕೆ ಅವ ಶಂಕೆಯಿಲ್ಲ. ಇವುಗಳನ್ನು ನಿರ್ಮೂಲಗೊಳಿಸಲು 'ಡಿಡಿಟಿ' ಎಂಬ ರಾಮಬಾಣ ಔಷಧವನ್ನು ಉಪಯೋಗಿಸಿದರೆ ನಿಜಕ್ಕೂ ಬಹಳ ಒಳ್ಳೇ ಪರಿಣಾಮ ಕಂಡುಬಂದಿತು. 'ಡಿಡಿಟಿ'ಯು ಕ್ರಿಮಿಕೀಟಗಳ ತೀಕ್ಷ್ಣ ವೈರಿಯೆಂದು ಕೆಲವು ಪತ್ರಿಕೆಗಳು ಹೊಗಳಿದರೆ ಮತ್ತೆ ಕೆಲವು ಅಷ್ಟು ಪರಿಣಾಮಕಾರಿಯಲ್ಲವೆಂದು ತೆಗಳಿರುತ್ತವೆ. ವಿದೇಶಿ ಪತ್ರಿಕೆಗಳು "ತಗಣಿಗಳ ನಿರ್ನಾಮ" "ಕ್ರಿಮಿಕೀಟಕ ಮೇಲೆ ಯುದ್ಧ" "ಡಿಡಿಟಿ ಎಚ್ಚರಾಗಿರಿ" ಮೊದಲಾದ ತಲೆ ಬರಹಗಳಿಂದ ಪ್ರಚಾರ ಕಾರ್ಯ ಸಾಗಿಸಿರುತ್ತವೆ. ಅದರ ಮೂಲವನ್ನು ಕಂಡು ಹಿಡಿಯುವದು ಒಳಿತು.

## ನಿರ್ದೋಷವಲ್ಲ

ಅದರಕೆಟ್ಟ ದೋಷಗಳು ಮೂರು. ಮೊದಲನೆಯದಾಗಿ ಅದು ಮನುಷ್ಯನಿಗೆ ವಿಷಕಾರಿಯಾಗಿದೆ. ಎರಡನೆಯದು ಅದು ಒಳ್ಳೇ ಹಾಗೂ ಕೆಟ್ಟ ಕ್ರಿಮಿಗಳೆರಡನ್ನೂ ನಾಶಮಾಡುತ್ತದೆ. ಕೊನೆಯದಾಗಿ ಕೆಲವು ಕೆಟ್ಟ ಕ್ರಿಮಿಗಳು ಇದರ ಕೈಯಿಂದ ಪಾರಾಗುತ್ತವೆ.

ನಾವು 'ಡಿಡಿಟಿ' ಯನ್ನು ಸೇವಿಸಿದರೆ ವಿಷಕಾರಿಯು. ಅದರಂತೆ ಬಹಳ ಕ್ರಿಮಿಕೀಟಗಳ ಪರಿಸ್ಥಿತಿ. ಇದಕ್ಕೆ ಸೇವಿಸಲಾರದಂತೆ ಎಚ್ಚರಾಗಿರುವದೇ ತಕ್ಕ ಕಾಲೋಚಿತ ಉಪಾಯ. ಒಮ್ಮೊಮ್ಮೆ ಧೂಳಿಯಲ್ಲಿಯ 'ಡಿಡಿಟಿ' ಯಿಂದಲೂ ಪರಿಣಾಮವಾಗಬಹುದು. ಅದು ಅತಿ ವಿರಳ. ಡಾ. ಪೌಲ ಎ. ನೀಲ (ಅಮೇರಿಕಾ) ಇವರ ಅಭಿಪ್ರಾಯದ ಮೇರೆಗೆ ಇಲ್ಲಿಯ ವರೆಗೆ ಮಾನವ ಜೀವಹರಣವು "ಡಿಡಿಟಿ"ಯಿಂದ ಆಗಿಲ್ಲ.

ಕೆಲವು ಕ್ರಿಮಿಕೀಟಗಳಿಗೆ ಇದು ಅತಿ ಭಯಂಕರವಾದ ಹಾಗೂ ತೀವ್ರವಾದ ವಿಷಕಾರಿಯಾಗಿದೆ ಎನ್ನಲಿಕ್ಕೆ ಎಷ್ಟೋ ಉದಾಹರಣೆಗಳುಂಟು. ಸೊಳ್ಳೆಯನ್ನು ಇದು ಒಂದು ತಾಸಿನಲ್ಲಿ ಕೊಲ್ಲುವದು. 'ಡಿಡಿಟಿ'ಯು ಸ್ವಲ್ಪ ವೇಳೆಯಲ್ಲಿ ಬಹಳ ಜೀವಿಗಳನ್ನು ಕೊಲ್ಲುವದು. ಕ್ರಿಮಿಗಳನ್ನು ನಾಶಮಾಡುವದರ ಸಲುವಾಗಿ ಬೈಲುಸೀಮೆ ಪ್ರದೇಶಗಳಲ್ಲಿ ಹೆಚ್ಚಾಗಿ ಚಲ್ಲಿದರೆ ಕಪ್ಪೆ, ಮೀನ ಮೊದಲಾದ ನಿರುಪದ್ರವಿ ಪ್ರಾಣಿಗಳನ್ನೂ ನಾಶಮಾಡುತ್ತದೆ. ಮತ್ತೆ ಇದರಂತೆ ಪಕ್ಷಿಗಳು ಕೂಡ ಸಾಯುವ ಪ್ರಸಂಗವಿದೆ. ಮಲೇರಿಯಾ ಪ್ರದೇಶಗಳಲ್ಲಿ 'ಡಿಡಿಟಿ'ಯನ್ನು ಕೆಲವೊಂದು ಪ್ರಮಾಣದಲ್ಲಿಯೇ ಮಾರ್ಪಡಿಸಿ 'ಲಾರ್ವಾ'ಗಳ ಉತ್ಪತ್ತಿಯನ್ನು ನಾಶಮಾಡಲು ಸಾಧ್ಯವಿದೆ. ಆದರೆ ಕೆಲವೊಂದು ಪ್ರದೇಶಕ್ಕೆ ಬೇಲಿ ಹಾಕಿ ಅಲ್ಲಿಯ ಎಲ್ಲ ಜೀವಿಗಳನ್ನು ನಾಶಮಾಡುವದು ಬಿಡಬೇಕು. ಈ ತರದ ಪ್ರಯೋಗವು ಸಾಧ್ಯವಾದರೆ, ಸೃಷ್ಟಿಯ ಸಮತೋಲನೆಯನ್ನು ಮುರಿದು ನಮ್ಮನ್ನು ದಿಗಿಲು ಮಾಡಬಹುದು. ದುರ್ದೈವದಿಂದ ಕೆಲವು ತಗಣಿಗಳು ಕೂಡ, ಹೆಚ್ಚು 'ಡಿಡಿಟಿ' ಉಪಯೋಗಿಸಿದರೂ ನಾಶವಾಗುವದಿಲ್ಲ. ಅದರಂತೆ ತಂಬಾಕ, ಕ್ಯಾಬೀಜ, ಟೋಮೆಟೊ ಗಿಡಗಳಿಗೆ ಹತ್ತುವ ಕ್ರಿಮಿಗಳನ್ನೂ ನಾಶಮಾಡಲು ಸಾಧ್ಯವಿಲ್ಲ.

ಆದರೆ ಒಂದು ಮಾತ್ರ ಸತ್ಯ. ಅದೇನಂದರೆ ಮಲೇರಿಯಾ ಬೇನೆಯನ್ನು ಹಬ್ಬಿಸುವ ಕ್ರಿಮಿಗಳನ್ನೂ ಮಾತ್ರ ಸಂಪೂರ್ಣವಾಗಿ ಅದು ನಾಶಮಾಡುತ್ತದೆ. ಅದನ್ನು ಮಾತ್ರ ಪೂರ್ಣ ಜಯಸಿದೆ ಎನ್ನಲಿಕ್ಕೆ ಯಾವ ಅತಂಕವಿಲ್ಲ. ಇದರಿಂದ ನರಕ ಯಾತನೆಯ ಸ್ಥಳಗಳನ್ನು ಅತಿ ಆರೋಗ್ಯಕರವಾದ ನಿವಾಸಗಳನ್ನಾಗಿ ಮಾರ್ಪಡಿಸಬಹುದು.

ಮುಂದಿನ ಶಾಂತಿ ದಿನಗಳಲ್ಲಿ 'ಡಿಡಿಟಿ' ಯು ಅತಿ ಉಚ್ಚವಾದ ಸ್ಥಾನವನ್ನಾಕ್ರಮಿಸಬಹುದು. ಆಶ್ಚರ್ಯಕರವೆಂದರೆ ಅದರಿಂದ ದನಕರುಗಳಾದರೂ ಮಾನವನಷ್ಟೇ ಲಾಭ ಪಡೆಯಬಹುದು. ಇದರ ಉಪಯೋಗದಿಂದ ದನಗಳ ದಡ್ಡಿ ಹಾಗೂ ಇತರ ಸ್ಥಳಗಳಲ್ಲಿಯ ನೊಣಗಳನ್ನು ನಾಶಮಾಡಬಹುದು. ಅದರಂತೆ ಉಣ್ಣೆ ಅಬಕಾರಿ ಮೊದಲಾದ ಕೀಟಕಗಳನ್ನಾದರೂ ಕೊಲ್ಲಬಹುದು. ಇದರಿಂದ ದನಗಳು ಹೆಚ್ಚು ಆರೋಗ್ಯವಂತವಾಗಿ ಮುಂದೆ ಹೈನವಾದರೂ ಬೆಳೆಯುತ್ತದೆ. ಮಲೇರಿಯಾ ತಜ್ಞರು ಆನಂದಭರಿತರಾಗಿರುತ್ತಾರೆ. ಅಮೇರಿಕೆಯಲ್ಲಿ ವರ್ಷಕ್ಕೆ ಸುಮಾರು ೪ ಲಕ್ಷ ಜನರು ಮಲೇರಿಯಾದಿಂದ ನರಳುತಿದ್ದರು. ಹಾಗೂ ೪೦೦೦ ಜನರು ಮರಣವನ್ನು ಹೊಂದುತ್ತಿದ್ದರು. ಜನದಟ್ಟಣೆಯಿದ್ದ ಸ್ಥಳಗಳಲ್ಲಿ ಇದನ್ನು ಉಪಯೋಗಿಸುವದರಿಂದ ಸ್ವಲ್ಪ ದಿನಗಳಲ್ಲಿ ಮಲೇರಿಯಾವನ್ನು ತೀರ ಕಡಿಮೆ ಮಾಡಲು ಶಕ್ತರಾಗಬಹುದು. ಬೈಲುಸೀಮೆಯ ಮಾತು ಬೇರೆ. ಒಕ್ಕಲತನದಲ್ಲಿಯಾದರೂ ಇದರ ಉಪಯೋಗ ಅತಿ ಸುಲಭ. ಕೆಲವು ಕ್ರಿಮಿಗಳನ್ನು ನಾಶಮಾಡಲು ಸಹಾಯವಾಗುವದು. ಹಾಗೂ ಪಲ್ಲೆ, ಬಟಾಟ, ಹೂವಿನ ಬಳ್ಳಿಗಳಿಗೆ ಉಪಯುಕ್ತವಾಗಿದೆ. ಜೇನ್ನೊಣಗಳಿಗೆ ವಿಷಕಾರಿಯಿದ್ದರೂ ಅತಿಸ್ವಲ್ಪ. ಇದು ಜೇನು ಸಾಗುವಳಿಗಾದರೂ ಉತ್ತೇಜನಕಾರಕ. 'ಡಿಡಿಟಿ' ಉಪಯೋಗದಿಂದ ನೊಣಗಳು, ಸೊಳ್ಳೆಗಳನ್ನು ನಾಶಮಾಡಬಹುದು. ಮನೆಗಳ ಗೋಡೆಗಳಿಗೆ ಇದನ್ನು ಸೀಮೆಎಣ್ಣೆಯಲ್ಲಿ ಮಿಶ್ರಮಾಡಿ ತೊಡೆಯಬೇಕು. ಕೆಲವು ತಿಂಗಳುಗಳವರೆಗೆ ಇದರ ಪರಿಣಾಮವಿರುತ್ತದೆ. ಅದರಿಂದ ಜಿಟ್ಟಗಳಿಗಾದರೂ ನಾಶಕಾರಿ. ಅಂತಿಮ ತಿನ್ನುವ ಹುಳಗಳನ್ನಾದರೂ ನಿರ್ನಾಮ ಮಾಡುತ್ತದೆ. ಕೆಲವು ಜಾತಿಯ ಇರುವೆಗಳ ಮೇಲೆ ಮಾತ್ರ ಇದರ ಪರಿಣಾಮಕಾರವಾಗುವದು. ಅದರ ಹಾಗೆ ತಗಣಿಕಾಟದಿಂದಾದರೂ ಮುಕ್ತಿಯನ್ನು ಹೊಂದಬಹುದು. ಒಟ್ಟಿನಲ್ಲಿ ಶಾಂತಿ ಜೀವನ ಹೊಂದಬೇಕಾದರೆ ಪ್ರತಿಯೊಬ್ಬನು ಹಾಗೂ ಸಮಾಜವು ಇದರ ಲಾಭವನ್ನು ಪಡೆಯಲೇಬೇಕು.

## ಯಾರಲ್ಲಿ ?

ಬಲಗೈಯಲಿ ತಾ ಕತ್ತಲು ಹಿಡಿದು
ಎಡಗೈಯಲಿ ತಾ ಬೆಳಗನು ಹಿಡಿದು
ಜಡಜೀವಿಗಳ
ಕಲಬಲ ಕಲಸಿ
ಕಲಸಿದನೆಲ್ಲ
ಕೂಡಲೆ ಬರಿಸಿ
ಸಾಗಿಹರಾರಲ್ಲಿ ?
ಮುಗಿಲಿನ ಮೇಗಲ್ಲಿ ?
ಸೂರ್ಯನ ಮೇಲೆ ಬಲ ಹೆಜ್ಜೆ
ಚಂದ್ರನ ಮೇಲೆ ಎಡ ಹೆಜ್ಜೆ
ಮಂಗಳ ಶನಿಗ್ರಹ-
ವೆಲ್ಲವ ದಾಟಿ
ಕಂಗಳ ಶಕ್ತಿಗೆ
ಕಾಣದೆ ದಾಟಿ
ಸಾಗಿಹರಾರಲ್ಲಿ ?
ಮುಗಿಲಿನ ಮೇಗಲ್ಲಿ ?
ತಾರಾಗಣವನು ಸಾಲಲಿ ನಿಲಿಸಿ
ಅಣುರಾಶಿಯನು ಬೈಲಲಿ ನುಗಿಸಿ
ಹೆಜ್ಜೆಯ ಗುರುತನು
ಕಾಲದಿ ಬಿಟ್ಟು
ಮೋಡಿಯ ಮಂತ್ರವ
ನೆಲ್ಲಕೆ ಕೊಟ್ಟು
ಸಾಗಿಹರಾರಲ್ಲಿ......?
ಮುಗಿಲಿನ ಮೇಗಲ್ಲಿ?
ಅನಂತ ಕೋಟಿಯ ಬರಿಸದ ಮುದುವ
ದಿನದಿನ ಹೆಚ್ಚು ಹೆಚ್ಚೇ ಬೆಳೆವ
ವಿಶ್ವಶಕ್ತಿಯ
ಬೆನ್ನಿಗೆ ಕಟ್ಟಿ
ಆಗುಹೋಗುಗಳ
ಕಾಲಲಿ ಮೆಟ್ಟಿ
ಸಾಗಿಹರಾರಲ್ಲಿ...... ?
ಮುಗಿಲಿನ ಮೇಗಲ್ಲಿ ?

— ಶ್ರೀ ಕೃಷ್ಣ ಪಾಟೀಲ, ಕಲಾಮಂಟಪ

## ಬಾಳ ಬೆಳಕು

೧.

"ಕಳೆದ ದಿನಗಳು ಒಳಿತು ಇಂದಿನವು
ಬಲು ಕೇಡು"
ಕಳೆದೆನೆಂದೆನಿತೊ ದಿನ, ಮಾಸ, ವರ್ಷ !
ಬಾಳಿನಲಿ ಬೆಳಕೊಂದು ಬಲು ದೂರ
ತೋರುವುದು:
"ನಾಳೆ ನಾ ಸುಖಿಯಾಗಿ ಬಾಳ್ವೆನೆಂದು"

೨.

ಬಿಸಿಲ ಬೇಗೆಗೆ ಬೆಂದು ಹಸಿದ ಒಡಲಿಗೆ ನೊಂದು
ರಸೆಯ ಹದಗೈಯ್ಯಲೀ ದೇಹ ಮನವೆ !
ಹಸುರಾಗಿ, ಬಸುರಾಗಿ, ಹಾಲ್ದೆನೆಯ ತಲೆಬಾಗಿ,
ಎಸೆವ ಹೊಲದಾ ಕನಸ ಕಂಡು ಮೈಮರೆವೆ !

೩.

ಕನಸು ಕಾಣಲು ಚಂದ, ಮನಕೆ ಬಲು ಆನಂದ
ತನುವು ತನ್ನನೆ ಮರೆತು ತನ್ಮಯತೆ ಹೊಂದಿ,
ಎನಿತೊ ಕಾಲವು ನಿಮಿಷ ಅರೆನಿಮಿಷವಾಗುವುದು
ಎನಿತೊ ಆಯಾಸವದು ಮನಕೆ ಉಲ್ಲಾಸ !

೪.

ಕನಸು ನನಸಾಯ್ತೆಂದು ಸುಗ್ಗಿ ಕಾಲವು ಬಂದು
ಮನದೊರತೆಯಿಂದೊ ಸರಿ ತನುರಾಗ ಬಿಂದು !
ಇನಿದನಿಯೊಳನುನಯದಿ ಮನವಾರೆ ದಸಿಗೈದು
ಮನೆಯ ಜನರೆಲ್ಲರೂ ರಾಶಿ ತೂರುವೆವು.

೫.

ದಾನಧರ್ಮವ ನೀಡಿ ಕರ್ಣನಿಗೆ ಸಮನೆನಿಸಿ
ಧನಿಕರಿಗೆ ಋಣಸಲಿಸಿ ನಂಬುಗೆಯನುಳಿಸಿ
ಎನಗೇನು ? ದಿನಗೂಲಿ, ಆಳಲಿ ಎಲ್ಲಿಹುದು?
ಹೊಲದೊಡೆಯನರೆಭಾಗ ಕಳೆದ ಮೇಲೆ !

೬

ಅರೆಯೊಡಲು ಕುದಿಯುವುದು; ಬರಿಯಮೈ
ನಡುಗುವುದು.
ಕರಿಕೋರಿ ಕಂಬಳಿಯೆ ಹೊದಿಕೆಯಿಹುದು;
ಗೋಮಾತೆ ಭೂಮಾತೆ ಇವರ ಸೇವೆಯಸಲಿಸೆ
"ಕಾಯಕವೆ ಕೈಲಾಸ" ಮಂತ್ರವಿಹುದು !

೭

ಲಾಭಲೋಭವ ತೊರೆದ ಯೋಗಿವರ ನಾನಲ್ಲ !
ಸುಖದಾಶೆ ಹಿಂಗಿಲ್ಲ; ನೆಲೆಯು ಸಿಕ್ಕಿಲ್ಲ.
ಬಾಳಿನಲಿ ಬೆಳಕೊಂದು ಬಲುದೂರ ತೋರು
ವುದು.
"ನಾಳೆ ನಾ ಸುಖಿಯಾಗಿ ಬಾಳ್ವೆನೆಂದು"

## ಗೇ--- ?

ಉರಿದು ಎದ್ದಿತು ಬೇಗೆ ಉಪವಾಸನೆಪದಿಂದ ।
ಮುದುಕ ಮಾತಾಡಿದನು ಮಾಡದಿರ್ಪನೆ
ಕೃತಿಯ ॥
ಒಂದು ಸೋಲನು ಒಪ್ಪಿ ಅಪ್ಪಿದನು ಸತ್ಯವನು ।
ಹಿಂದೂ ಮುಸಲ್ಮಾನ ರೈಕ್ಯವನು ಸಾಧಿಸದೆ ॥
ಅಂದಿಹನು ಅನುತಿಹನು ಇಂದು ಗಾಂಧಿಯು
ತಾನು ।
ಅದನೆ ಅವಲೋಕಿಸಿತು ಜಗವೆಲ್ಲ ಬೆರಗಾಗಿ ।
ಪಂಡಿತರ ಪಲ್ಲವಿಯು ಪಟೇಲರಾ ಭಾಷ್ಯ ।
ಕಟುವಾಗಿ ಕೇಳುತಿದೆ ಜನದ ಜಂಗುಳಿಯು ॥
ಒಂದುಕಡೆ ಹಿಂದುಗಳ ಉದ್ವೇಗದ ಜ್ಞಾನ ।
ಅದಕಾಗಿ ಅಹಿಂಸೆಯ ಅಮೃತದಾಸ್ವಾದ ॥
ಇನ್ನೊಂದು ಕಡೆಯಲ್ಲಿ ಅಸಹನೀಯದ ಕೃತಿ ।
ಅದಕಾಗಿ ಪರಿತಾಪ ಸಿಡಿಲು ಗರ್ಜನೆಯು ॥
ಇಂತು ಈ ಪರಿಯಾಗಿ ಬಳಲುತಿದೆ ಜಗವೆಲ್ಲ ।
ಈ ತೆರದೊಳುಳಿಯುತಿರೆ ಜಗಕೆ ಸುಖವಿಲ್ಲ ॥
ಇದನರಿಯದಿರ್ಪವನು ಮಾನವನು ತಾನಲ್ಲ॥
ಕೊಲೆಸುಲಿಗೆ ಕ್ರೌರ್ಯಗಳು ಇದಕೆ ಸಾಧನವಲ್ಲ॥
ಇಂದು ಆಗಲೆ ಬೇಕು ಹಿಂದುಮುಸಲ್ಮಾನರೈಕ್ಯ।
ಬಂಧುಗಳು ಇವರೆಲ್ಲ ಭಾರತದೊಳಿರುವರೆಲ್ಲ ॥
ಎಂದು ತೋರಿದೊಡಿಂದೆ—ದೊರೆವುದೈ ನವು
ಗೆಲ್ಲ ।
ಅಂದದಾ ಸ್ವಾತಂತ್ರ್ಯ ಸಾಮ್ರಾಜ್ಯವೆಲ್ಲ ॥

ಚಕ್ರಧಾರಿ (ಕನ್ನಡಜಾಣ)

## ಚಂದಾದಾರರಿಗೆ ಸೂಚನೆ

ಮೂರು ತಿಂಗಳಿಗೆ ಅಥವಾ ಕಡಿಮೆ ಮುದ್ದತಿಗೆ ವ್ಹಿ. ಪಿ. ಕಳಿಸುವದಿಲ್ಲ. ಮುಂಗಡ ಹಣ ಕಳಿಸಬೇಕು. ಅಂಚೆಯ ಅವ್ಯವಸ್ಥೆಯಿಂದ ಪತ್ರಿಕೆ ತಲ್ಪದಿದ್ದರೆ ನಾವು ಹೊಣೆಯಲ್ಲ. ಅವಧಿ ಮುಗಿಯುವದೆಂಬದನ್ನು ನೀವೇ ನೆನಪಿಟ್ಟು ಹಣ ಕಳಿಸಬೇಕು. ಯೋಗ್ಯ ವೇಳೆಗೆ ಹಣ ಬರದಿದ್ದರೆ ಏನನ್ನು ತಿಳಿಸದೆ ಪತ್ರಿಕೆ ನಿಲ್ಲಿಸಲಾಗುವದು.

ವ್ಯವಸ್ಥಾಪಕ,



## ಚಂದಾದಾರರಲ್ಲಿ ವಿನಂತಿ

ಯಾವದೇ ಪತ್ರವ್ಯವಹಾರ ಮಾಡುವಾಗ ನಿಮ್ಮ ಚಂದಾ ನಂಬರನ್ನು ಅಂದರೆ ನಾವು ನಿಮ್ಮ ವಿಳಾಸದ ಪ್ರಾರಂಭಕ್ಕೆ ಸೇರಿಸಿದ ನಂಬರನ್ನು ಬರೆದರೆ ಮಾತ್ರ ನಿಮ್ಮ ಪತ್ರಕ್ಕೆ ಲಕ್ಷಗೊಡಲಾಗುವದು. ಅವಧಿ ಮುಗಿಯುವ ಮುಂಚೆಯೇ ೧೫ ದಿನ ಪೂರ್ವದಲ್ಲಿ ವ್ಹಿ. ಪಿ. ಕೊಡಲಾಗುವದು. ವ್ಹಿ. ಪಿ ಬೇಡಾದವರು ೧೫ ದಿನ ಮೊದಲೇ ನಮಗೆ ತಿಳಿಸಬೇಕು. ವ್ಹಿ. ಪಿ. ತಿರಸ್ಕರಿಸಿ ಹಿಂದುಗಡೆ M. O. ಮಾಡಿದರೆ ವ್ಹಿ ಪಿ. ಖರ್ಚು ಮುರಿಯಲಾಗುವದು.

ವ್ಯವಸ್ಥಾಪಕ,



ಸಂಪಾದಕೀಯ

# ಟೀಕೆ-ಟಿಪ್ಪಣೆಗಳು

## ಪ್ರಜರ ಸಾರ್ವಭೌಮಾಧಿಕಾರ

ಬ್ರಿಟಿಶ ರಾಜರು ಇಲ್ಲಿಂದ ಕಾಲುಕಿತ್ತುವ ಸಮಯವನ್ನು ನೋಡಿ ಇದುವರೆಗೆ ಅವರ ಮಾಂಡಲಿಕರಾಗಿದ್ದ ಹಿಂದುಸ್ತಾನದ ನರೇಂದ್ರರು ತಮ್ಮ ಸಂಸ್ಥಾನಗಳ ಸಾರ್ವಭೌಮಾಧಿಕಾರವು ತಮ್ಮದೇ ಎಂದು ಸಾಧಿಸುತ್ತಿರುವದನ್ನೂ, ಅವರ ಖುಣತಿಂದ ಕೆಲವು ಮಂತ್ರಿವರ್ಯರು ಈ ಬಗ್ಗೆ ವಾದ ಹೂಡಿದುದನ್ನೂ ನೋಡಿ ನಮಗೆ ಸಖೇದಾಶ್ಚರ್ಯವಾಗಿರುವದು. ಅರಸುತನವು ದೇವದತ್ತ ಹಕ್ಕು ಎಂಬ ಮಧ್ಯಯುಗದ ತತ್ವವನ್ನು ಅವರು ಮುಂದೊಡ್ಡುತಿರುವದಂತೂ ಅವರ ಬುದ್ಧಿಭ್ರಮೆಯನ್ನೇ ಸೂಚಿಸುತ್ತದೆ. ನಿಜವಾಗಿ ನೋಡಿದರೆ ಈ ವಾದವೇ ಹುಟ್ಟಬೇಕಾಗಿಲ್ಲ. ರಾಜ್ಯದ ಒಡೆತನವು ರಾಜರದಾಗಿರದೆ ಪ್ರಜರದಿರುತ್ತದೆಂದು ಅನೇಕ ಉದಾಹರಣೆಗಳನ್ನು ಕೊಡಬಹುದು. "ಅರಸು" ಈ ಶಬ್ದದ ಅರ್ಥವೇ ಅದನ್ನು ಸೂಚಿಸುತ್ತದೆ. ಪ್ರಜರ ಒಪ್ಪಿಗೆಯಿಲ್ಲದ ಅದೆಷ್ಟು ಜನ ಯುವರಾಜರು ಅರಸತನ ಕಳೆದುಕೊಂಡ ಉದಾಹರಣೆಗಳಿಲ್ಲ? ಲೋಕಪ್ರಿಯನಾದ ದಶರಥ ಮಹಾರಾಜನು ಸಹ ಶ್ರೀರಾಮಚಂದ್ರನಿಗೆ ಯೌವರಾಜ್ಯಾಭಿಷೇಕ ಮಾಡುವಾಗ ಜನಮತವನ್ನು ತೆಗೆದುಕೊಂಡ ಉದಾಹರಣೆ ಚಿರಸ್ಮರಣೀಯವಿರುವದು. ಪ್ರಜರಿಗೆ ಒಪ್ಪಿಗೆಯಾಗದ ಮದುವೆಯನ್ನು ಮಾಡಿಕೊಳ್ಳಲು ಹಟಹಿಡಿದ ಬ್ರಿಟಿಶಸಾಮ್ರಾಟನು ರಾಜದಂಡವನ್ನು ಕೆಳಗಿಟ್ಟು ದೇಶಾಂತರಹೋದ ಉದಾಹರಣೆ ಪ್ರತ್ಯಕ್ಷ ನಮ್ಮ ಕಣ್ಮುಂದಿರುವದು. ಸಾರ್ವಭೌಮಾಧಿಕಾರವು ಪ್ರಜರಿಗೆ ಸೇರಿದ್ದೆಂಬುದಕ್ಕೆ ಇದಕ್ಕೂ ಹೆಚ್ಚಿನ ಉದಾಹರಣೆಗಳು ಇನ್ನೇನು ಬೇಕು? ಪ್ರಜರ ಅನುರಾಗ ಅನುಗ್ರಹಗಳನ್ನು ಕಳೆದುಕೊಂಡ ಅರಸರು ಮುರಿದ ಕಾಲಿನ ಹೊರಸುಗಳೇ ಎಂದು ಕನಕದಾಸರು ಆಡಿದ ಮಾತುಗಳು ತ್ರಿಕಾಲ ಸತ್ಯವಿರುವವು. ಪರಿಸ್ಥಿತಿ ಹೀಗಿರುವಾಗ ನಮ್ಮ ನರೇಂದ್ರರ ಒಣ ಹೆಮ್ಮೆಯನ್ನು ನೋಡಿ ಕನಿಕರವಾಗುತ್ತದೆ. ಅರಸೊತ್ತಿಗೆ ಬೇಕೋ ಬೇಡವೋ ಎಂದು ಹಿಂದುಸ್ತಾನದ ೫೬೨ ಸಂಸ್ಥಾನಗಳಲ್ಲಿ ಜನಮತ ತಗೆದುಕೊಂಡರೆ ಸಾಮಾನ್ಯವಾಗಿ ಎಲ್ಲ ನರೇಂದ್ರರಿಗೂ ಅರ್ಧಚಂದ್ರ ದೊರೆಯುವದರಲ್ಲಿ ಸಂಶಯವಿಲ್ಲ. ಆದುದರಿಂದ ಸರಳವಿದ್ದ ಈ ಪ್ರಶ್ನೆಯನ್ನು ನರೇಂದ್ರರು ಹುರುಳಿಲ್ಲದ ವಾದಹೂಡಿ ಪ್ರಜರ ಅವಕೃಪೆಗೆ ಕಾರಣವಾಗುವದಿಲ್ಲೆಂದು ಆಶಿಸುತ್ತೇವೆ. ಮೈಸೂರ ಕಾಂಗ್ರೆಸ್ಸಿನ ಹಿಂದಿನ ಅಧ್ಯಕ್ಷರಾದ ಶ್ರೀ ಕೆ. ಟಿ. ಭಾಷ್ಯಮರು ಹೇಳಿದಂತೆ, "ಸಾರ್ವಭೌಮಾಧಿಕಾರವು ಯಾರಿಗೆ ಸೇರಿದ್ದೆಂಬುದು ಮಹತ್ವದ ವಿಷಯವಲ್ಲ. ಯಾರಿಗೆ ಸೇರಬೇಕೆಂಬುದು ಮಹತ್ವವಾದುದು. ಅದು ಪ್ರಜರಿಗೇ ಎಂಬುದು ನಿಃಸಂಶಯವಾದುದು." ಇಂಥ ಸಮತೂಕದ ಮಾರ್ಗವನ್ನು ಬಿಟ್ಟು ಸಚಿವ ಶ್ರೇಷ್ಠರೆಂದೆನಿಸಿಕೊಂಡ ತಿರುವಾಂಕೂರಿನ ದಿವಾಣ ಸರ್ ರಾಮಸ್ವಾಮಿ ಅಯ್ಯರರೂ ಮೈಸೂರ ದಿವಾಣ ಸರ್ ಅರ್ಕಾಟ ರಾಮಸ್ವಾಮಿ ಮುದಲಿಯಾರರೂ ಅರಸ ಪಕ್ಷವಹಿಸಿ ಗಾಳಿಯನ್ನು ಗುದ್ದಿ ಮೈನೋಯಿಸಿಕೊಳ್ಳುತ್ತಿರುವರು. ಅವರ ವಾದಸರಣಿಯಲ್ಲಿ ವಿವೇಕತನವು ಎಳ್ಳಷ್ಟೂ ಇಲ್ಲ. ಕನ್ನಡ ಕವಿ ರಾಘವಾಂಕನು ಹೇಳಿದಂತೆ, ನಿಂದ ನೆಲದ ಗುಣವೂ ಅಲ್ಲ, ಬಂದಕಾಲದ ಮಹಿಮೆಯೂ ಅಲ್ಲ. ಬರಿ ತಿಂದ ಅನ್ನದ ರಿಣವಾಗಿರುವದು.

## ಭವಿಷ್ಯತ್ತು ಭೀಕರವಾಗಿದೆ

ಕಾಂಗ್ರೆಸ ಕಾರ್ಯ ಸಮಿತಿಯು ಬ್ರಿಟಿಶ್ ಸರಕಾರದ ಡಿಸೆಂಬರ ಆರನೇ ದಿನಾಂಕದ ಅರ್ಥವಿವರಣೆಯ ಪ್ರಕಟನೆಯನ್ನು ದೀರ್ಘವಾಗಿ ವಿಚಾರಿಸಿ ಒಂದು ಹೇಳಿಕೆಯನ್ನು ಹೊರಡಿಸಿರುತ್ತದೆ. ಬ್ರಿಟಿಶ ಸರಕಾರದ ವಿಸಂಗತತನದ ಪರಂಪರೆಯನ್ನು ಅದರಲ್ಲಿ ಎತ್ತಿ ತೋರಿಸಿ, ನುಡಿಯಂತೆ ನಡೆಯುವದು ಅವರಿಗೆ ಗೊತ್ತಿಲ್ಲವಾದ್ದರಿಂದ ವರಿಷ್ಠ ನ್ಯಾಯಾಲಯದ ಕಟ್ಟೆ ಹತ್ತುವದು ಸಹ ಹುರುಳಿಲ್ಲದ್ದೆಂದು ಹೇಳಿ ಕೊನೆಯ ತೀರ್ಮಾನವನ್ನು ದಿಲ್ಲಿಯಲ್ಲಿ ಬೇಗನೆ ಸೇರಲಿರುವ ಅಖಿಲ ಭಾರತ ಕಾಂಗ್ರೆಸ ಸಮಿತಿಗೆ ಬಿಟ್ಟುಕೊಟ್ಟಿರುವರು. ಪ್ರಾಂತಗಳು ಗುಂಪುಗಳನ್ನು ಮಾಡಿಕೊಳ್ಳಲು ಸ್ವತಂತ್ರವಿರುವವೆಂದು ಮೇ ೧೬ ನೇ ದಿನಾಂಕ ಘೋಷಣೆಯ ೧೫ ನೇ ಪರಿಚ್ಛೇದದಲ್ಲಿ ಹೇಳಿದೆ. ೧೯ ನೇ ಪರಿಚ್ಛೇದದಲ್ಲಿ ಗುಂಪುಗಳನ್ನು ನಿರ್ಮಿಸುವ ಕ್ರಮಗಳನ್ನು ಕೊಟ್ಟಿದೆ. ಇವುಗಳಲ್ಲಿ ಮೊದಲನೆಯದು ತತ್ವ, ಎರಡನೆಯದು ಕ್ರಮ. ಮೊದಲನೆಯದನ್ನು ಒಪ್ಪಿಕೊಂಡರೆ ಮಾತ್ರ ಎರಡನೆಯದರ ಅಗತ್ಯ ಉಂಟಾಗುವದು. ಇಲ್ಲದಿದ್ದರೆ ಇಲ್ಲ. ಹೀಗಿರುವಾಗ ಬ್ರಿಟಿಶ ಸರಕಾರದವರು ಎರಡನೆಯದಕ್ಕೇ ಮಹತ್ವ ಕೊಟ್ಟು ಅದು ಘೋಷಣೆಯ ಮುಖ್ಯಾಂಗವೆಂದು ಹೇಳಿದ್ದು ಉಚಿತವೇ? ಶಕ್ಯವಿಲ್ಲ. ಮೇ ತಿಂಗಳ ಘೋಷಣೆಯಲ್ಲಿ ಹೆಚ್ಚು ಕಡಿಮೆ ಮಾಡಲು ಬರಲಾರದು. ಅಥವಾ ಅದಕ್ಕೆ ಅರ್ಥವಿವರಣೆಯ ಟಿಪ್ಪಣಿಯನ್ನೂ ಜೋಡಿಸಲು ಬರುವದಿಲ್ಲೆಂದು ಭಾರತ ಮಂತ್ರಿಗಳ ಮಾಸ್ಟರ ತಾರಾಸಿಂಗರಿಗೆ ೧೯೪೬ ಜೂನ ಒಂದನೇ ದಿನಾಂಕದಲ್ಲಿ ಬರೆದ ಪತ್ರದಲ್ಲಿ ಸ್ಪಷ್ಟ ಕಾಣಿಸಿದ್ದಾರೆ. ಹೀಗಿದ್ದರೂ ಕಾಂಗ್ರೆಸ ಮತ್ತು ಶೀಖ ಪ್ರತಿನಿಧಿಗಳನ್ನು ಲಂಡನ್ನಿಗೆ ಕರೆದುಕೊಂಡು ಹೋಗಿ, ಹಿಂದಿನ ವಚನಗಳನ್ನೆಲ್ಲ ಮುರಿದು, ಘೋಷಣೆಯ ಅರ್ಥವಿವರಣೆಯನ್ನು ಕೊಟ್ಟರು, ಅದಕ್ಕೆ ಕೆಲವು ಹೊಸ ಸಂಗತಿಗಳನ್ನೂ ಜೋಡಿಸಿದರು. ಬ್ರಿಟಿಶ್ ಸರಕಾರದ ವಿಸಂಗತತನ ಇಲ್ಲಿಗೇ ಮುಗಿಯಲಿಲ್ಲ. ಡಿಸೆಂಬರ ಆರನೇ ದಿನಾಂಕದ ಪ್ರಕಟನೆಯಲ್ಲಿ ಅವಶ್ಯವೆನಿಸಿದರೆ ಹಿಂದೀ ಘಟನಾಸಮಿತಿ ವರಿಷ್ಠ ನ್ಯಾಯಾಲಯಕ್ಕೆ ಹೋಗಿ ಅರ್ಥ ವಿವರಣೆಯನ್ನು ಪಡೆದುಕೊಳ್ಳಬಹುದೆಂದು ಹೇಳಲಾಗಿದೆ. ಕಾಂಗ್ರೆಸು ಈ ಮಾರ್ಗವನ್ನು ಅವಾಗಲೋ ಸೂಚಿಸಿದೆ. ಅದರಂತೆ ನಡೆಯಲೂ ಸಿದ್ಧವಿರುವದು. ಆದರೆ ಬ್ರಿಟಿಶ್ ಮಂತ್ರಿಗಳು ಲಾರ್ಡ್ಸ ಮತ್ತು ಕಾಮನ್ಸ ಸಭೆಯಲ್ಲಿ ಚರ್ಚೆ ನಡೆದಾಗ ವರಿಷ್ಠ ನ್ಯಾಯಾಲಯದ ತೀರ್ಪು ತಮಗೆ ಬಂಧನಕಾರಕವಿಲ್ಲೆಂದು ಹೊಸದಾಗಿ ಹೇಳಿರುವರು. ಮುಸ್ಲಿಂ ಲೀಗಿಗೂ ಬಂಧನಕರವಿಲ್ಲೆಂದು ಜಿನ್ನಾರು ಪ್ರಕಟಿಸಿರುವರು ಹೀಗಿರುವಾಗ ಕಾಂಗ್ರೆಸು ಯಾರಿಗಾಗಿ ವರಿಷ್ಠ ನ್ಯಾಯಾಲಯಕ್ಕೆ ಹೋಗಬೇಕು ? ಇಂತು ಪರಿಸ್ಥಿತಿ ಬಿಕ್ಕಟ್ಟಿಗೆ ಬಂದಿರುವದು. ಡಿಸೆಂಬರ ಆರನೇ ದಿನಾಂಕದ ಪ್ರಕಟನೆಯನ್ನು ಕಾಂಗ್ರೆಸು ಸ್ವೀಕರಿಸಲೇಬೇಕೆಂದು ಬ್ರಿಟಿಶ ಸರಕಾರವು ಅಹ್ವಾನ ಕೊಟ್ಟಂತಾಗಿರುವದು. ಅಖಿಲ ಭಾರತ ಕಾಂಗ್ರೆಸ ಸಮಿತಿಯು ಅದಕ್ಕೆ ಯೋಗ್ಯ ಉತ್ತರ ಕೊಟ್ಟು ಕಣ್ಣುಮುಚ್ಚಾಲೆಯಾಟ ನಡೆಸಿದ ಬ್ರಿಟಿಶ್ ಮುತ್ಸದ್ದಿಗಳ ಕಣ್ಣುಗಳಲ್ಲಿ ಅಂಜನ ಹಾಕುವದೆಂದು ನಾವು ನಂಬುತ್ತೇವೆ.

## ಜಿನ್ನಾರ ಹಟ

ಮುಸ್ಲಿಂ ಲೀಗಿನ ಅಧ್ಯಕ್ಷ ಬ್ಯಾ. ಜಿನ್ನಾರು ಮೊದಲೇ ಹಟವಾದಿಗಳು. ಬ್ರಿಟಿಶ ಸರಕಾರದವರು ಅವರನ್ನು ಇತ್ತೀಚೆಗೆ ಸಲಿಗೆಯಿಂದ ನಡೆಸಿಕೊಳ್ಳಲು ಪ್ರಾರಂಭಿಸಿದಂದಿನಿಂದ ಅವರ ಹಟಕ್ಕೆ ಹಿಡಿತವಿಲ್ಲದಾಗಿದೆ. ಬ್ರಿಟಿಶ್ ಘೋಷಣೆಯನ್ನೊಪ್ಪಿ ನಡುಗಾಲ ಸರಕಾರದಲ್ಲಿ ಸೇರಿದ್ದರೂ ಪಾಕಿಸ್ತಾನದ ಕೂಗನ್ನು ಬಿಟ್ಟಿಲ್ಲ. ಅವ್ಯವಹಾರ್ಯವಾದ ಈ ಯೋಜನೆಯನ್ನು ವಿವೇಕವಂತರು ನಿರಾಕರಿಸಿದಾಗ್ಯೂ ಪಾಕಿಸ್ತಾನದ ಅಲಿಂಗನ ಸುಖವನ್ನು ತ್ಯಜಿಸಲು ಅವರು ಸಿದ್ಧರಾಗಿಲ್ಲ. ಅದಕ್ಕೆ ಬೆಂಬಲ ಪಡೆಯಲು ಅನೇಕಾನೇಕ ವಾಮ ಮಾರ್ಗಗಳನ್ನು ಹಿಡಿಯಹತ್ತಿದ್ದಾರೆ. ಬಿಹಾರ ಗಲಭೆಯ ನೆವಮಾಡಿ ಪ್ರಜರ ಸ್ಥಾನಾಂತರ ಅಗತ್ಯವೆಂದು ಬಾಯಿಬಿಟ್ಟರು. ಅವರ ಅಂಧಾನುಯಾಯಿಗಳು ಇದನ್ನೇ ಶಿರಸಾವಹಿಸಿ ಬಿಹಾರದ ಮುಸಲ್ಮಾನರು ಬಂಗಾಲದಲ್ಲಿ ವಲಸೆ ಹೋಗುವಂತೆ ಪ್ರಚೋದಿಸುತಿದ್ದಾರೆ. ಬಂಗಾಲ ಸರಕಾರವು ತನ್ನ ಪ್ರಾಂತದ ನಿರಾಶ್ರಿತರ ಯೋಗಕ್ಷೇಮಕ್ಕಿಂತ ಬಿಹಾರ ಮುಸಲ್ಮಾನರ ಯೋಗಕ್ಷೇಮವನ್ನು ಹೆಚ್ಚು ದಕ್ಷತೆಯಿಂದ ನೋಡಿಕೊಳ್ಳುತ್ತಿದೆ. ಸ್ಥಾನಾಂತರ ಧೋರಣೆಯ ಪರಿಣಾಮ ಭೀಕರವಿದೆಯೆಂಬದು ಅಂಧಾನುಯಾಯಿಗಳಿಗೆ ಇನ್ನೂ ತಿಳಿಯದಿರುವದು ಶೋಚನೀಯವಾಗಿದೆ. ಆದರೆ ಜಿನ್ನಾರ ಪ್ರಭುತ್ವವು ಆಚಂದ್ರಾರ್ಕವಿದ್ದರೂ—ಹಾಗೇನೂ ಇಲ್ಲ-ಸಮಸ್ತ ಜನರನ್ನು ಸದಾಕಾಲ ತಪ್ಪು ದಾರಿ ಹಿಡಿಸುವದು ಸಾಧ್ಯವಿಲ್ಲ. ಅವರ ಧೋರಣೆಯ ನಿಷ್ಫಲತೆ ಅಗಲೇ ಅನೇಕರಿಗೆ ಒಡೆದುಕಾಣಹತ್ತಿದೆ. ಬಿಹಾರ ಪ್ರಾಂತಿಕ ಮುಸ್ಲಿಂ ಲೀಗಿನ ಹಿಂದಿನ ಕಾರ್ಯದರ್ಶಿಗಳಾದ ಮೊಯನುಲ್ಲಾರವರು ಒಂದು ಪ್ರಕಟನೆ ಹೊರಡಿಸಿ ಬಿಹಾರ ಮುಸಲ್ಮಾನರ ಪ್ರಾಂತ ತ್ಯಾಗವನ್ನು ಖಂಡಿಸಿರುವರು. "ಅರ್ಧ ಕೋಟಿ ಜನರು ಹೊಲ ಮನೆಗಳನ್ನು ಬಿಟ್ಟು ಹೋಗುವದೆಲ್ಲಿ? ಇದು ಇಸ್ಲಾಂ ತತ್ವಕ್ಕೆ ವಿರುದ್ಧವಾದುದು. ಮುಸಲ್ಮಾನರು ಇಲ್ಲಿಯೇ ಬಂದ ಪರಿಸ್ಥಿತಿಯನ್ನು ಎದುರಿಸಬೇಕು" ಎಂದವರು ಬಿಚ್ಚು ಮಾತುಗಳನ್ನಾಡಿ ಮುಸ್ಲಿಂ ಧುರೀಣರು ಜನಸಾಮಾನ್ಯರಿಗೆ ಸರಿಯಾದ ಮಾರ್ಗ ತೋರಿಸಬೇಕೆಂದು ದೈನ್ಯದಿಂದ ಕೇಳಿಕೊಂಡಿರುವರು. ಇದು ಒಂದು ಮಾತು. ಇನ್ನೊಂದು ವಿಷಯದಲ್ಲಿಯೂ ಜಿನ್ನಾರು ತಮ್ಮ ಹಟ ಸಾಧಿಸುವದಕ್ಕೆ ಜನರ ಕಣ್ಣಲ್ಲಿ ಮಣ್ಣೆರಚಲು ಪ್ರಯತ್ನಿಸುತ್ತಿದ್ದಾರೆ. ಹಿಂದುಸ್ತಾನದಲ್ಲಿ ಹಿಂದು ಸಾಮ್ರಾಜ್ಯ ಸ್ಥಾಪಿತವಾದರೆ ಮಧ್ಯಪೂರ್ವದ ಮುಸ್ಲಿಂ ರಾಷ್ಟ್ರಗಳಿಗೆ ಗಂಡಾಂತರ ಬರುವದೆಂದು ಇಜಿಪ್ತದಲ್ಲಿ ಹುಯಿಲೆಬ್ಬಿಸಿದ್ದಾರೆ. ಸುದಾನ ಇಜಿಪ್ತದಲ್ಲಿರಬೇಕೆಂದೂ ಅರಬ ರಾಷ್ಟ್ರಗಳ ಸಂಯುಕ್ತರಾಜ್ಯ ಸ್ಥಾಪಿಸಬೇಕೆಂದೂ ಪ್ರಯತ್ನವನ್ನಾರಂಭಿಸಿದ ಇಜಿಪ್ತವು ಜಿನ್ನಾರ ವಿಚ್ಛೇದನ ಧೋರಣೆಗೆ ಅದೆಂತು ಬೆಂಬಲ ಕೊಡುವದೋ ನಾವು ಕಾಣೆವು. ಸತ್ಯವು ಒಂದಿಲ್ಲೊಂದು ದಿನ ಹೊರಬೀಳುವಂತೆ ಜಿನ್ನಾರ ಹಟ ಧೋರಣೆಯ ಹೂರಣ ಹೊರಬೀಳಹತ್ತಿದೆ. ಮುಸಲ್ಮಾನರು ಲೀಗ ಧೇಸಿಝಮ್ ವಿರುದ್ಧ ಬಂಡಾಯ ಹೂಡಬೇಕೆಂದು ಸಿಂಧ ಜಮೇತದವರು ಸಾರಿದ್ದಾರೆ. ಅಡ್ಡಹಾದಿ ಹಿಡಿದ ಲೀಗಿನವರಿಗೆ ಈ ಓಘವನ್ನು ನಿಲ್ಲಿಸುವದು ಸಾಧ್ಯವೇ ? ಇಲ್ಲವೆಂದರೆ ತಪ್ಪಾಗದು.

## ಸ್ಮಟ್ಸರ ದುರಹಂಕಾರ

ಬಿದ್ದರೂ ಮೀಸೆಗೆ ಮಣ್ಣು ಹತ್ತಿಲ್ಲವೆನ್ನುವದು ದುರಹಂಕಾರ ವಾದಿಗಳ ಮಾರ್ಗ. ವಯೋವೃದ್ಧರೂ ಜ್ಞಾನವೃದ್ಧರೂ ಆದ ದಕ್ಷಿಣ ಆಫ್ರಿಕೆಯ ಸೇನಾಪತಿ-ಸಚಿವ ಫೀಲ್ಡ ಮಾರ್ಶಲ ಜನರಲ್ ಸ್ಮಟ್ಸರು ಆ ವರ್ಗದವರೆಂದು ಹೇಳಲು ನಮಗೆ ಖೇದವಾಗುತ್ತದೆ. ಈ ಪ್ರಪಂಚದಲ್ಲಿಯ ಸಕಲ ಮಾನವರೂ ಸರಿಸಮಾನರು ಎಂದು ಯುಕ್ತರಾಷ್ಟ್ರ ತಾಮ್ರಪಟದಲ್ಲಿ ಸ್ವಹಸ್ತಾಕ್ಷರದಿಂದ ಬರೆದ ಅವರು ಈಗ ತಿರುಗಿ ಬಿದ್ದಿದ್ದಾರೆ. ಪುರಾಣ ಹೇಳಿ ಬದನೇಕಾಯಿ ತಿನ್ನುವ ಡಂಬಾಚಾರದ ಪ್ರವೃತ್ತಿಯವರದು. ಯುಕ್ತರಾಷ್ಟ್ರಸಭೆಯಲ್ಲಿ ಅವರ ಡಂಭಾಚಾರಕ್ಕೆ ಯೋಗ್ಯ ಶಾಸನ ದೊರೆಯಿತು. ಆದರೂ ಅವರ ದುರಹಂಕಾರ ಕಡಿಮೆಯಾಗಿಲ್ಲ. ವರ್ಣದ್ವೇಷ ಏರುತ್ತಲೇ ಇದೆ. ಮಾನವ ಸಮಾನತೆಯ ತತ್ವವನ್ನು ಖಂಡಿಸಿ ಅದನ್ನು ಒಪ್ಪಿದುದಾದರೆ ಜಗತ್ತು ನಡೆಯುವದು ಸಾಧ್ಯವಿಲ್ಲೆಂದಿದ್ದಾರೆ. ಇವರ ಕೂಗೂ ನದಿಯ ಮಹಾಪೂರದಲ್ಲಿ ತೇಲಿಹೋಗುತ್ತಿದ್ದ ನರಿಯ 'ಪ್ರಪಂಚದ ಪ್ರಳಯವಾಗುತ್ತಿದೆ' ಎಂಬ ಕೂಗೂ ಒಂದೇ ಆಗಿರುವದು. ತಮ್ಮಲ್ಲಿದ್ದ ವರ್ಣದ್ವೇಷದ ಕೊಳೆಯನ್ನು ಮುಚ್ಚಿಕೊಳ್ಳುವದಕ್ಕೆ ಪರರಲ್ಲಿಯ ಛಿದ್ರವನ್ನೆಣಿಸಬಂದಿರುವರು. ಹಿಂದು-ಮುಸಲ್ಮಾನ ಭೇದ, ಯಹೂದಿ ಮುಸ್ಲಿಂದ್ವೇಷ ಮೊದಲಾದವುಗಳಿಗೂ ಆಫ್ರಿಕೆಯಲ್ಲಿಯ ವರ್ಣದ್ವೇಷಕ್ಕೂ ಅಂತರವೇನೆಂದು ಕೇಳಿದ್ದಾರೆ. ಕಾಮಾಲೆಯವರಿಗೆ ಲೋಕವು ಹಳದಿಯಾಗಿ ಕಾಣುವಂತೆ ಸ್ಮಟ್ಸರಿಗೆ ವರ್ಣದ್ವೇಷವು ಎಲ್ಲ ಕಡೆಗೂ ಕಾಣುತ್ತಿದೆ. ಪ್ರತ್ಯೇಕ ರಾಷ್ಟ್ರದ ಬೇಡಿಕೆ ಮತ್ತು ನಾಗರಿಕ ಹಕ್ಕುಗಳ ಬೇಡಿಕೆಗಳಲ್ಲಿಯ ಭೇದವನ್ನರಿಯದ ಈ ಮುತ್ಸದ್ದಿಗೆ ಏನೆಂದು ಕರೆಯಬೇಕು. ಮೂರನೇ ಮಹಾಯುದ್ಧದ ಬೀಜವೆಲ್ಲಿಯಾದರೂ ಇದ್ದರೆ ಅದು ಜನರಲ್ ಸ್ಮಟ್ಸರೆಂದು ನಾವು ಧೈರ್ಯವಾಗಿ ಹೇಳಬಯಸುತ್ತೇವೆ. ಅದನ್ನು ಮೊಳಕೆಯಲ್ಲಿಯೇ ಚಿವುಟಿದರೆ ಶಾಂತಿ; ಇಲ್ಲದಿದ್ದರೆ ಅಶಾಂತಿ ತಪ್ಪಿದ್ದಲ್ಲ.

## ಚೀನಕ್ಕೊಂದು ಸ್ಥಿರ ರಾಜ್ಯಘಟನೆ

ಚೀನಕ್ಕೊಂದು ಸ್ಥಿರ ರಾಜ್ಯಘಟನೆಯು ರಚಿಸಲ್ಪಟ್ಟದ್ದು ಅದಕ್ಕೆ ಚೀನದ ೧೫೫೫ ಪ್ರಜಾಪ್ರತಿನಿಧಿಗಳು ಒಮ್ಮತದ ಒಪ್ಪಿಗೆ ಕೊಟ್ಟಿರುವರು. ಅದು ಹೊಸ ವರ್ಷದ ದಿನ ಘೋಷಿಸಲ್ಪಡುವದು. ಮತ್ತು ೧೯೪೭ ನೇ ಡಿಸೆಂಬರ ೨೫ ರಿಂದ ಕಾರ್ಯಕಾರಿಯಾಗುವದು. ಚೀನದ ೩೦೦೦ ವರ್ಷಗಳ ಚಿತ್ರ ವಿಚಿತ್ರ ಇತಿಹಾಸದಲ್ಲಿ ಇದೊಂದು ಮಹತ್ವದ ಘಟ್ಟವೆಂದು ನಾವು ಹೇಳದಿರಲಾರೆವು. ಚೀನವು ಅತಿ ಪ್ರಾಚೀನ ಸಾಮ್ರಾಜ್ಯ, ಜಗತ್ತಿನಲ್ಲಿಯೇ ಅತಿ ದೊಡ್ಡ ದೇಶ. ಅದರ ಜನಸಂಖ್ಯೆಯೂ ಪ್ರಪಂಚದ ಎಲ್ಲ ರಾಷ್ಟ್ರಗಳನ್ನೂ ಮೀರಿದೆ. ಅದು ೪೬ ಕೋಟಿಯಷ್ಟಿದೆಯೆಂದು ಇತ್ತೀಚಿನ ಜನಗಣತಿಯಿಂದ ತಿಳಿಯುತ್ತದೆ. ಇಂಥ ವಿಸ್ತಾರವಾದ ಸಾಮ್ರಾಜ್ಯದ ಇತಿಹಾಸವು ಚಿನ್ನದ ಕತೆಯಾಗುವದರ ಬದಲು ಚಿತ್ರವಿಚಿತ್ರವಾಗಿರುತ್ತದೆ. ರಾಷ್ಟ್ರದಲ್ಲಿ ಎಂದೂ ನೆಮ್ಮದಿಯಿಲ್ಲ. ಪರಚಕ್ರಗಳ ಮತ್ತು ಪಾಳೆಯಗಾರ ದಾಳಿಗಳಿಗಂತೂ ಎಣೆಯಿಲ್ಲ. ೧೯೧೧ ರಲ್ಲಿ ಕೊನೆಯದಾಗಿ ಸ್ಥಾನಭ್ರಷ್ಟವಾದ ಮಂಚೂ ವಂಶದವರು ೨೪ ನೆಯವರು. ಆ ದೇಶದ ಆರ್ಥಿಕ ದುಸ್ಥಿತಿಯಂತೂ ಹೇಳತೀರದು. ೧೮೪೯ ರಲ್ಲಿ ಅರ್ಥಿಕ ಕ್ರಾಂತಿ ಪ್ರಾರಂಭವಾಯಿತು. ಅಂದಿನಿಂದ ೧೯೧೧ ರ ವರೆಗೆ ಅವ್ಯಾಹತವಾಗಿ ಪ್ರಜರ ಹೋರಾಟ ನಡೆದು ಅದೇವರ್ಷ ಅಕ್ಟೋಬರ ೧೦ ನೇ ದಿನ ಪ್ರಜಾ ರಾಜ್ಯವು ಘೋಷಿಸಲ್ಪಟ್ಟಿತು. ಅದು ಕಾಲೂರಿ ಸ್ಥಿರವಾಗುವದಕ್ಕೆ ಮತ್ತೆ ನಾಲ್ಕು ತಿಂಗಳು ಬೇಕಾಯಿತು. ಅಧುನಿಕ ಚೀನದ ಜನಕನೆನಿಸಿದ ಸನ್-ಯತ-ಸೇನರೇ ಪ್ರಜಾರಾಜ್ಯವನ್ನು ಸ್ಥಾಪಿಸಿದರು. ಆದರೆ ರಾಷ್ಟ್ರವು ಅಳತೆ ಮೀರಿ ವಿಸ್ತಾರವಿದ್ದದರಿಂದ ಸೇನಾಪತಿಗಳು ತಾವಿದ್ದಲ್ಲಿ ತಮ್ಮದೊಂದು ಪ್ರತ್ಯೇಕ ರಾಜ್ಯವನ್ನು ಸ್ಥಾಪಿಸಿಕೊಂಡರು. ಆಶ್ಚರ್ಯವೆಂದರೆ ಪೇಕಿಂಗದಲ್ಲಿ ಕೇಂದ್ರ ಸರಕಾರವು ಹಾಗೇ ಉಳಿಯಿತು. ಪರರಾಷ್ಟ್ರಗಳು ಅದಕ್ಕೇ ಮನ್ನಣೆ ಕೊಟ್ಟಿದ್ದವು. ಸನ್-ಯತ್-ಸೇನರು ಕಾಲಕ್ರಮೇಣ ರಶಿಯಾ ಮತ್ತು ಇನ್ನಿತರ ರಾಷ್ಟ್ರಗಳ ಬೆಂಬಲವನ್ನು ತಮ್ಮ ರಾಜ್ಯಕ್ಕೆ ಪಡೆದರೂ ಚೀನವನ್ನು ಒಂದುಗೂಡಿಸಿ ಒಂದೆ ರಾಜ್ಯವನ್ನಾಗಿಸುವ ಅವರಧ್ಯೇಯ ಅವರ ಜೀವಮಾನದಲ್ಲಿ ಸಾಧ್ಯವಾಗಲಿಲ್ಲ! ೧೯೨೫ ರಲ್ಲಿ ಅವರು ನಿಧನಹೊಂದಿದಾಗ ಎಲ್ಲ ಕಡೆಗೂ ಅನಿಶ್ಚಿತತೆ ತುಂಬಿತ್ತು. ಅನಂತರ ಅಧಿಕಾರಕ್ಕೆ ಬಂದ ಜನರಲ್ ಚಿಯಾಂಗ ಕೈಶೇಕರು ೧೯೨೭ ರಲ್ಲಿ ಪೇಕಿಂಗ ಸರಕಾರವನ್ನು ಸೋಲಿಸಿ, ೧೯೨೮ ರಲ್ಲಿ ರಾಷ್ಟ್ರೀಯ ಸರಕಾರ ಸ್ಥಾಪಿಸಿದರು. ಅಂದಿನಿಂದ ಇಂದಿನ ವರೆಗೆ ಅವರ ಆಡಳಿತ ಅವಿಚ್ಛಿನ್ನವಾಗಿ ನಡೆದಿದೆಯೆಂದು ಹೇಳಲಿಕ್ಕೆಯಿಲ್ಲ. ಈ ಮಧ್ಯೆ ಜಪಾನವು ಎರಡು ಸಲ ದಾಳಿ ಮಾಡಿ ಕೊನೆಗೆ ಸೋತಿತು. ಇಷ್ಟಾದರೂ ಚೀನದ ಆಪತ್ತುಗಳು ದೂರವಾಗಿಲ್ಲ. ಕಮ್ಯೂನಿಸ್ಟರು ಉತ್ತರ ಪ್ರಾಂತಗಳಲ್ಲಿ ಸ್ವತಂತ್ರರಿದ್ದಾರೆ. ಅವರು ಪ್ರಾರಂಭಿಸಿದ ಯಾದವೀ ಕಲಹ ನಿಂತಿಲ್ಲ. ಆದರೂ ಚೀನದ ಬಹುಸಂಖ್ಯಾಕ ಪ್ರಜಾಪ್ರತಿನಿಧಿಗಳು ಇದೇ ನವಂಬರ ೧೫ರಿಂದ ೪೦ದಿನ ಸಭೆ ಸೇರಿ ಹೊಸ ರಾಜ್ಯ ಘಟನೆಯನ್ನು ಸ್ವೀಕರಿಸಿದ್ದಾರೆ. ದಿವಂಗತ ಸನ್—ಯತ್—ಸೇನರ ಉದಾತ್ತ ತತ್ವಗಳು ಅದರಲ್ಲಿ ಅಡಕವಾಗಿರುತ್ತವೆಂದು ಹೇಳಲಾಗಿದೆ. ಅದರ ವಿವರಗಳಿನ್ನೂ ನಮಗೆ ತಿಳಿದುಬಂದಿಲ್ಲ. ಆದರೂ ಅರ್ಧ ಶತಮಾನದ ವರೆಗೆ ಕ್ರಾಂತಿಯ ಅಗ್ನಿಪರೀಕ್ಷೆಯಲ್ಲಿ ಕಾದು ಚೊಕ್ಕ ಚಿನ್ನವಾಗಿ ಹೊರಬಿದ್ದ ಚೀನಿಯರು ರಚಿಸಿದ ರಾಜ್ಯ ಘಟನೆ ಅವರಿಗುಚಿತವಾಗಿದೆಯೆಂದು ನಂಬಲಡ್ಡಿಯಿಲ್ಲ. ೩೦೦೦ ವರ್ಷಗಳಿಂದ ಅಸ್ಥಿರತೆಯುಳ್ಳ ಚೀನಕ್ಕೆ ಈ ಘಟನೆಯಿಂದಾದರೂ ಸ್ಥಿರತೆ ಪ್ರಾಪ್ತವಾಗಿ ಚೀನವು ಪ್ರಪಂಚದ ರಾಷ್ಟ್ರಮಾಲಿಕೆಯಲ್ಲಿ ತನಗುಚಿತವಾದ ಸ್ಥಾನವನ್ನು ಪಡೆಯಲೆಂದು ನಾವು ಹಾರೈಸುತ್ತೇವೆ.

ನಮ್ಮ ಜ್ಯೋತಿಷಿಗಳಿಗೆ ಅಕಸ್ಮಾತ ಅಸ್ವಸ್ಥವಾಗುದರಿಂದ ಈ ವಾರದ ಭವಿಷ್ಯ ಕೊಡುವದಸಾಧ್ಯವಾಯಿತೆಂದು ಓದುಗರಿಗೆ ತಿಳಿಸಲು ವಿಷಾದವಾಗುತ್ತದೆ.

— ಸಂ. ಕ.

# ಬ್ರಿಟಿಶ ಸರಕಾರದ ಬದಲಾಗುತ್ತಿರುವ ಬಣ್ಣ

## ಫೆಡರಲ್ ಕೋರ್ಟಿಗೆ ಹೋಗುವದು ನಿರರ್ಥಕ

### ಜನೆವರಿ ೫ ಕ್ಕೆ ಅಖಿಲ ಭಾರತ ಕಾಂಗ್ರೆಸ್ ಸಭೆ

### ಕಾಂಗ್ರೆಸ್ ಕಾರ್ಯ ಸಮಿತಿಯ ನಿರ್ಣಯ

### ಘಟನಾ ಸಮಿತಿ ಜನೆವರಿ ೨೦ ಕ್ಕೆ ಮುಂದುವರಿಯಿತು

ಘಟನಾ ಸಮಿತಿಯ ಪ್ರಾಸ್ತಾವಿಕ ಅಧಿವೇಶನ ಡಿಸೆಂಬರ ೨೩ ರ ವರೆಗೆ ಜರಗಿ ಆ ಮೇಲೆ ಜನೆವರಿ ೨೦ ಕ್ಕೆ ಮುಂದುವರಿಯಿತು. ಪಂಡಿತ ನೆಹರೂ ಅವರ ಧ್ಯೇಯ ನಿರೂಪಣೆಯ ಗೊತ್ತುವಳಿಯ ಮೇಲಿನ ಮತಗಣನೆ ಜನೆವರಿ ೨೦ ಕ್ಕೆ ಮುಂದೆ ಬಿದ್ದಿದೆ.

ಡಿಸೆಂಬರ ೬ ರ ಬ್ರಿಟಿಶ ಸರಕಾರದ ಹೇಳಿಕೆಯನ್ನು ಕುರಿತು ಕಾಂಗ್ರೆಸ್ ಕಾರ್ಯ ಸಮಿತಿ ಒಂದು ದೀರ್ಘ ಹೇಳಿಕೆಯನ್ನು ಹೊರಡಿಸಿ ಸರಕಾರದ ಚಂಚಲ ಧೋರಣೆಯನ್ನು ಖಂಡಿಸಿದೆ. ಫೆಡರಲ್ ಕೋರ್ಟಿಗೆ ಹೋಗುವ ವಿಚಾರವನ್ನು ಬಿಟ್ಟು ಕೊಡಲಾಗಿದ್ದು, ಕೊನೆಯ ನಿರ್ಣಯವನ್ನು ಕೈಕೊಳ್ಳಲು ಅ. ಭಾ. ಕಾಂಗ್ರೆಸ್ ಸಭೆಯನ್ನು ಜನೆವರಿ ೫ ಕ್ಕೆ ಕರೆಯಲಾಗಿದೆ.

#### ಪ್ರಾಸ್ತಾವಿಕಾಧಿವೇಶನದ ಮುಕ್ತಾಯ

ಕ್ರಿಸ್ಮಸ ನಿಮಿತ್ತ ಎರಡು ದಿನ ವಿರಾಮು ತೆಗೆದುಕೊಂಡು ಪುನಃ ಸಭೆ ಸೇರಬೇಕೆಂಬ ಸೂಚನೆ ಮೊದಲು ಬಂದಿದ್ದರೂ ಘಟನಾ ಸಮಿತಿಯ ಪ್ರಾಸ್ತಾವಿಕ ಸಭೆ ತಾ. ೨೩ ಸೋಮವಾರ ದಿನವೇ ಜನೆವರಿ ೨೦ ರ ವರೆಗೆ ಮುಂದೆ ಹಾಕಲ್ಪಟ್ಟಿತು. ಪಂಡಿತ ನೆಹರೂ ಅವರ ಹಿಂದುಸ್ತಾನ ಸಾರ್ವಭೌಮ ಸ್ವತಂತ್ರ ಪ್ರಜಾರಾಜ್ಯ, ಎಂಬ ಧ್ಯೇಯ ನಿರೂಪಣ ಗೊತ್ತುವಳಿಯ ಚರ್ಚೆಯನ್ನು ತಾ. ೨೦ ನೆ ದಿನವೇ ಅಧ್ಯಕ್ಷರ ಸೂಚನೆಯ ಮೇರೆಗೆ ಮುಂದೆ ಹಾಕಲಾಯಿತು. ಗೊತ್ತುವಳಿಯ ಮೇಲೆ ಮಾತಾಡತಕ್ಕವರು ಇನ್ನೂ ೫೦ ಜನರುಳಿದಿದ್ದು ಪ್ರಾಸ್ತಾವಿಕ ಅಧಿವೇಶನ ಮುಕ್ತಾಯವಾಗುವ ಮೊದಲೇ ಬೇರೆ ಮಹತ್ವದ ನಿರ್ಣಯಗಳನ್ನು ತೆಗೆದುಕೊಳ್ಳುವದು ಅವಶ್ಯವಿದ್ದುದರಿಂದ ಚರ್ಚೆಯನ್ನು ಮುಂದೆ ಹಾಕಬೇಕೆಂದು ಅಧ್ಯಕ್ಷ ರಾಜೇಂದ್ರ ಬಾಬುಗಳು ಹೇಳಿದರು. ಇದಲ್ಲದ ಈ ಅವಧಿಯಲ್ಲಿ ಈಸಭೆಗೆ ಬಾರದೆ ಉಳಿದವರು ಮುಂದಿನ ಅಧಿವೇಶನದಲ್ಲಿ ಉಪಸ್ಥಿತರಾಗಲು ನಿರ್ಣಯಿಸಬಹುದೆಂದೂ ಅವರು ಆಶಿಸಿದರು. ರಾಜೇಂದ್ರ ಬಾಬುಗಳು ಹಾಗೆ ಹೇಳಿದಾಗಲೆ ಕಾಂಗ್ರೆಸ್ಸು ಮತ್ತೊಮ್ಮೆ ಉದಾರತೆ ತೋರಲು ಸಿದ್ಧವಾಗಿದೆಯೆಂಬ ಸಂಕೇತ ದೊರೆತಿತೆಂದು ಹೇಳಬಹುದು ಲೀಗು ಒಳಬರುವಂತೆ ಇನ್ನೊಮ್ಮೆ ದಾಕ್ಷಿಣ್ಯ ತೋರಿಸಲು ಕಾಂಗ್ರೆಸ್ಸು ನಿರ್ಧರಿಸಿತ್ತೆಂದು ಆಗಲೆ ಅರಿವಾಯಿತು. ಹಲದಿನಗಳ ದೀರ್ಘವಿಚಾರದ ನಂತರ ಕಾರ್ಯಸಮಿತಿ ಜಯಕರ ಮೊದಲಾದವರ ಸೂಚನೆಗೆ ಗೌರವ ತೋರಿಸುವದು ಯೋಗ್ಯವೆಂದು ಭಾವಿಸಿರಬೇಕು.

#### ಸಂಧಾನ ಸಮಿತಿ

ಆ ಮೇಲಿನ ದಿನಗಳಲ್ಲಿ ಘಟನಾ ಸಮಿತಿ ಮುಖ್ಯವಾಗಿ ಉಪಸಮಿತಿಗಳನ್ನು ನೇಮಿಸುವದರಲ್ಲಿ ಪ್ರಸಕ್ತವಾಗಿತ್ತು. ಪರಿಚಯಪತ್ರ ಸಮಿತಿ (Credentials Committee) ಮೊದಲಾದ ನಿತ್ಯ ವ್ಯವಹಾರವನ್ನು ಸಾಗಿಸಿಕೊಂಡು ಹೋಗಲು ಅವಶ್ಯವಾದ ಹಲ ಸಮಿತಿಗಳನ್ನು ನೇಮಿಸಲಾಗಿದ್ದಲ್ಲದೆ ೬ ಜನರ ಸಂಧಾನ ಸಮಿತಿಯನ್ನೂ ನೇಮಿಸಲಾಯಿತು. ನಿಯಮಾವಲಿ ಸಮಿತಿಯೊಪ್ಪಿಸಿದ ವರದಿಯನ್ನು ಸಭೆಯ ಗುಪ್ತಾಧಿವೇಶನದಲ್ಲಿ ಚರ್ಚಿಸಲಾಯಿತು.

ಸಂಸ್ಥಾನ ಸಂಧಾನ ಸಮಿತಿಯ ಮುಖ್ಯ ಕಾರ್ಯವೆಂದರೆ ಸಂಸ್ಥಾನಗಳಿಗೆ ಘಟನಾಸಮಿತಿಯಲ್ಲಿ ಕೊಡುವ ಪ್ರಾತಿನಿಧ್ಯದ ಬಗೆಯನ್ನು ಸಂಸ್ಥಾನಿಕರೊಡನೆ ಚರ್ಚಿಸಿ ಒಪ್ಪಂದಮಾಡಿಕೊಳ್ಳುವದು. ಈ ಬಗ್ಗೆ ಸಂಸ್ಥಾನಿಕರಪರವಾಗಿ ಒಂದು ಸಂಧಾನ ಮಂಡಲ ಈಗಾಗಲೆ ನೇಮಿಸಲ್ಪಟ್ಟಿದೆ. ಅವರೊಡನೆ ಈ ೬ ಜನರ ಸಮಿತಿ ಸಂಧಾನ ನಡೆಸಿ ೫೬೩ ಸಂಸ್ಥಾನಗಳಿಗೆ ಸಿಗುವ ಒಟ್ಟು ೯೩ ಘಟನಾ ಸಮಿತಿ ಸ್ಥಾನಗಳನ್ನು ಹೇಗೆ ಹಂಚಬೇಕೆಂಬ ಬಗ್ಗೆಯೂ ಆ ಪ್ರತಿನಿಧಿಗಳನ್ನು ಯಾವ ಪ್ರಕಾರ ಆರಿಸಬೇಕೆಂಬ ಬಗ್ಗೆಯೂ ಒಪ್ಪಂದ ಮಾಡಿಕೊಳ್ಳಬೇಕಾಗುವದು. ಇದು ಚಿನ್ನಾಟದ ಕೆಲಸವಲ್ಲ. ಸಂಸ್ಥಾನಗಳ ಪ್ರತಿನಿಧಿಗಳನ್ನು ಪ್ರಜೆಗಳೇ ಆರಿಸಬೇಕೆಂದು ಪ್ರಜಾಸಂಸ್ಥೆಗಳು ಮೊದಲಿಂದಲೂ ಬೇಡಿವೆ. ಆದರೆ ಸಂಸ್ಥಾನಿಕರಿಗೆ ತಮ್ಮ ಪ್ರತಿನಿಧಿಗಳೇ ಹೋಗಬೇಕೆಂಬ ಆತುರ. ಕಾಂಗ್ರೆಸ್ಸಾದರೂ ಸ್ವಾಭಾವಿಕವಾಗಿ ಪ್ರಜೆಗಳ ಆಶೆ ಆಕಾಂಕ್ಷೆಗಳನ್ನೆ ಎತ್ತಿ ಹಿಡಿದಿದೆ. ಆದರೆ ಇದರ ನಿರ್ಣಯ ಸಂಧಾನದಿಂದ ಆಗಬೇಕಾದ್ದು. ಪರಿಣಾಮತಃ ಅರ್ಧದಷ್ಟು ಪ್ರತಿನಿಧಿಗಳನ್ನು ಪ್ರಜೆಗಳಿಗೆ ಪ್ರಭುಗಳು ದಯಪಾಲಿಸುವಂತೆ ಮನವೊಲಿಸಿದರೆ ಬಹಳ ದೊಡ್ಡ ಕೆಲಸ ಸಾಧಿಸಿದಂತೆ. ಈಗಾಗಲೆ ಈ ವಿಷಯದಲ್ಲಿ ಘಟನಾ ಸಮಿತಿಗೂ ಸಂಸ್ಥಾನಿಕರಿಗೂ ತಿಕ್ಕಾಟ ಪ್ರಾರಂಭವಾಗಿದೆಯೆಂದರೂ ತಪ್ಪಾಗದು. ಹಿಂದೊಮ್ಮೆ ಸಂಸ್ಥಾನವೊಂದರಲ್ಲಿ ಮಂತ್ರಿಗಳಾಗಿದ್ದ ಸರ್ ಎನ್. ಗೋಪಾಲಸ್ವಾಮಿ ಅಯ್ಯಂಗಾರರೇ ಘಟನಾ ಸಮಿತಿಯಲ್ಲಿ ಧ್ಯೇಯನಿರೂಪಣ ಗೊತ್ತುವಳಿಯ ಮೇಲೆ ಮಾತಾಡುತ್ತ ನರೇಂದ್ರರ ಅಧಿಕಾರ ಪ್ರಜೆಗಳಿಂದ ಪ್ರಾಪ್ತವಾದದ್ದೆಂಬ ತತ್ವವನ್ನು ಪ್ರತಿಪಾದಿಸಿದ್ದು ನರೇಂದ್ರರನ್ನು ದಿಗಿಲಿಗೆಬ್ಬಿಸಿದೆ. ಅಲ್ಲದೆ ಶ್ರೀ ಸಿ. ರಾಜಗೋಪಾಲಾಚಾರಿಯವರೂ ಒಂದು ಭಾಷಣದಲ್ಲಿ ಸಂಸ್ಥಾನ ಪ್ರಜೆಗಳ ರಾಜಭಕ್ತಿ ಲಯವಾಗುತಿದೆಯೆಂದೂ ನೆಹರೂ ಅವರ ಧ್ಯೇಯ ಗೊತ್ತುವಳಿ ಸಂಸ್ಥಾನಗಳಿಗೂ ಅನ್ವಯಿಸುವದೆಂದೂ ಯೋಗ್ಯಸಂಸ್ಥಾನಿಕರನ್ನು ಬೇಕಾದರೆ ಗವರ್ನರರಾಗಿ ನೇಮಿಸಬಹುದೆಂದೂ ಹೇಳಿದ್ದರಿಂದ ಅವರಿಗೆ ಮತ್ತಷ್ಟು ಭಯವಾಗಿದೆ. ಈ ಎರಡೂ ಹೇಳಿಕೆಗಳನ್ನು ತಿರ್ವಾಂಕೂರು ದಿವಾಣರಾದ ಸರ್ ಸಿ. ಪಿ. ರಾಮಸ್ವಾಮಿಯವರು ಖಂಡಿಸಿ ಸಂಸ್ಥಾನಗಳ ಸಾರ್ವಭೌಮತ್ವ ಪ್ರಜೆಗಳಲ್ಲಿಲ್ಲ ರಾಜರಲ್ಲಿ ನಿಹಿತವಾಗಿದೆಯೆಂದು ಸಾರಿದ್ದಾರೆ. ಮೈಸೂರು ದಿವಾಣರಾದರೂ ಇದೇ ಮಾತನ್ನು ಹೇಳಿದ್ದಾರೆ. ಆದರೆ ಗ್ವಾಲೇರ ಸಂಸ್ಥಾನದ ಕಾರ್ಯಕಾರಿ ಮಂಡಲದ ಉಪಾಧ್ಯಕ್ಷರಾದ ಸರ್ ಎಸ್. ಪಿ. ರಾಜಗೋಪಾಲಾಚಾರಿಯವರು ಸಿ. ಪಿ. ಯವರ ಈ ರಾಜ ಸಾರ್ವಭೌಮತ್ವದ ಪುರಾತನ ತತ್ವವನ್ನು ನಗೆಗೀಡು ಮಾಡಿ ಪ್ರಜಾಸಾರ್ವಭೌಮತ್ವದಿಂದಲೇ ರಾಜರ ಅಧಿಕಾರ ಪ್ರಾಪ್ತವಾಗುವದೆಂದು ಪ್ರಕಟಿಸಿದ್ದಾರೆ. ಈ ವಾದದ ಸಂಗಡ ಮೈಸೂರು ಮೊದಲಾದ ಸಂಸ್ಥಾನಗಳಲ್ಲಿ ಪ್ರಜೆಗಳ ಹಕ್ಕುಗಳನ್ನು ಸ್ಥಾಪಿಸಲು ಹೋರಾಟದ ಪ್ರಸ್ತಾವವೆದ್ದಿದೆ. ಈ ತಿಕ್ಕಾಟದಲ್ಲಿ ಲೀಗು ಹೊರಗಿರುವ ಸಂಧಿಯನ್ನು ಸಾಧಿಸಿ ಕಾಂಗ್ರೆಸಿನಿಂದಸೌಕರ್ಯಗಳನ್ನು ಎಳೆದುಕೊಳ್ಳಲು ಸಂಸ್ಥಾನಿಕರು ಯತ್ನಿಸಬಹುದು. ಚಿಹ್ನಗಳು ಹಾಗೆಯೇ ಕಾಣುತ್ತವೆ. ಹಿಂದೂ ಅರಸೊತ್ತಿಗೆಯ ಕೆಳಗಿರುವ ಮುಸ್ಲಿಂ ಬಹುಸಂಖ್ಯಾಕ ಸಂಸ್ಥಾನಗಳು ಎರಡೇ ಇರುವಾಗ ಮುಸ್ಲಿಂ ಅರಸೊತ್ತಿಗೆಯ ಕೆಳಗೆ ೫—೬ ಹಿಂದೂ ಬಹುಸಂಖ್ಯಾಕ ಸಂಸ್ಥಾನಗಳು ಅವೂ ದೊಡ್ಡವುಗಳು ಇರುವದರಿಂದ ಮುಸ್ಲಿಂ ಲೀಗು ನರೇಂದ್ರರ ಪಕ್ಷ ಕಟ್ಟಿದರೆ ಆಶ್ಚರ್ಯವಲ್ಲ.

#### ಕಾರ್ಯ ಸಮಿತಿಯ ನಿರ್ಣಯ

ಕಾಂಗ್ರೆಸ್ ಕಾರ್ಯ ಸಮಿತಿಯವರು ದೀರ್ಘ ವಿಚಾರದ ನಂತರ ಡಿಸೆಂಬರ ೬ ಕ್ಕೆ ಲಂಡನದಲ್ಲಿ ಬ್ರಿಟಿಶ ಸರಕಾರ ಹೊರಡಿಸಿದ ಘೋಷಣೆಯನ್ನು ಕುರಿತು ದೊಡ್ಡ ಹೇಳಿಕೆಯೊಂದನ್ನು ಹೊರಡಿಸಿದ್ದಾರೆ ಈ ಡಿಸೆಂಬರ ೬ ರ ಹೇಳಿಕೆ ಮೂಲ ಮೇ ೧೬ ರ ಹೇಳಿಕೆಯನ್ನು ಬದಲಿಸುವಂತಹದೂ ಹೊಸತಾಗಿ ಕೆಲವಂಶ ಸೇರಿಸುವಂತಹದೂ ಆಗಿದೆಯೆಂದು ಅವರು ಸಾರಿದ್ದಾರೆ. ಇದಿ ವಿವಾದದ ಇತಿಹಾಸವನ್ನು ಕೂಲಂಕಷವಾಗಿ ೧೪ ಪ್ಯಾರಾಗಳಲ್ಲಿ ವಿವರಿಸಲಾಗಿದೆ. ಅದರೊಳಗೆ ಬ್ರಿಟಿಶ ಮಂತ್ರಿತ್ರಯರೂ ವಾಯಿಸರಾಯರೂ ಕಾಲಕಾಲಕ್ಕೆ ಹೊರಡಿಸಿದ ಹೇಳಿಕೆ ಕೊಟ್ಟ ಅಭಿವಚನಗಳಿಗೆ ಹೇಗೆ ಡಿಸೆಂಬರ ೬ ರ ಪ್ರಕಟನೆ ವಿರುದ್ಧವಾಗಿದೆಯೆಂದು ಎತ್ತಿ ತೋರಿಸಲಾಗಿದೆ.

#### ಗುಂಪುಗಳ ಗಂಡಾಂತರ

೧೯೪೬ ಮೇ ೧೬ ರ ಘೋಷಣೆಯ ೧೫ ನೆ ಪ್ಯಾರಾದಲ್ಲಿ ಬ್ರಿಟಿಶ ಹಿಂದುಸ್ತಾನ ಮತ್ತು ಸಂಸ್ಥಾನಗಳನ್ನೊಳಗೊಂಡ ಒಂದು ಹಿಂದೀ ಯೂನಿಯನ್ ಇರಬೇಕೆಂದೂ ಅದಕ್ಕೊಪ್ಪಿಸಿದ ವಿಶಿಷ್ಟ ವಿಷಯಗಳಲ್ಲದೆ ಉಳಿದ ಹಾಗೂ ಶೇಷಾಧಿಕಾರಗಳು ಪ್ರಾಂತಗಳಿಗಿರಬೇಕೆಂದೂ ಪ್ರಾಂತಗಳು ಗುಂಪುಗಳಾಗಿ ಸೇರಲು ಸ್ವತಂತ್ರವಿರಬೇಕೆಂದೂ ಹೇಳಲಾಗಿದ್ದರೆ ೧೯ನೆಪ್ಯಾರಾದಲ್ಲಿಗುಂಪು ಸೇರುವ ರೀತಿಯನ್ನು ವಿವರಿಸಲಾಗಿದೆ. ಈ ಎರಡು ಪ್ಯಾರಾಗಳಲ್ಲಿರುವ ವಿರೋಧಾಭಾಸವನ್ನು ಮೇ ೨೫ ರಲ್ಲೆ ಕಾರ್ಯಸಮಿತಿ ಮಂತ್ರಿತ್ರಯದ ಲಕ್ಷ್ಯಕ್ಕೆ ತಂದಿತ್ತು. ಮರುದಿನ ಅದಕ್ಕೆ ಅವರಿತ್ತ ಉತ್ತರದಲ್ಲಿ ಈಗ ಗೊತ್ತುಪಡಿಸಿದ ಗುಂಪುಗಳಲ್ಲಿ ಸೇರಬೇಕೋ ಬೇಡವೋ ಎಂಬ ನಿರ್ಣಯವನ್ನು ಆಯಾ ಪ್ರಾಂತಗಳು ಮೊದಲಿಗೇ ಮಾಡಬಹುದೆಂದು ಕಾಂಗ್ರೆಸ್ಸು ಹಚ್ಚಿದ ಅರ್ಥ ಮಂತ್ರಿತ್ರಯದ ಉದ್ದೇಶಕ್ಕೆ ಸರಿಹೋಗುವದಿಲ್ಲವೆಂದೂ ಗುಂಪುಗಳ ನಿರ್ಮಾಣ, ಯೋಜನೆಯ ಮುಖ್ಯ ಅಂಗವಾಗಿರುವದರಿಂದ ಎರಡೂ ಪಕ್ಷಗಳ ಸಮ್ಮತಿಯಿಲ್ಲದೆ ಈಗ ಅದನ್ನು ಬದಲಿಸಬರುವದಿಲ್ಲವೆಂದೂ ತಿಳಿಸಲಾಗಿತ್ತು. ಆದರೆ ಕಾಂಗ್ರೆಸ್ಸಿನ ವಾದ ಗುಂಪುಗಳ ರಚನೆಯ ರೀತಿಯ ಬಗ್ಗೆ ಇರಲಿಲ್ಲ. ಒಂದು ಪ್ರಾಂತವಾಗಲಿ ಅದರ ಭಾಗವಾಗಲಿ ಒಪ್ಪಿಕೊಳ್ಳದೆ ಅದನ್ನು ಒಂದು ಗುಂಪಿನಲ್ಲಿ ಒತ್ತಾಯದಿಂದ ಸೇರಿಸುವದು ಪ್ರಾಂತಿಕ ಸ್ವಾಯತ್ತತೆಯ ತತ್ವಕ್ಕೆ ಸರಿಹೋಗುವದೇ ಎಂಬ ಬಗ್ಗೆ ಇತ್ತು. ಗುಂಪಿನಲ್ಲಿ ಕುಳಿತು ಘಟನೆಯನ್ನು ರಚಿಸುವ ಬಗ್ಗೆ ಕಾಂಗ್ರೆಸ್ಸಿನ ಆಕ್ಷೇಪವೇನೂ ಇದ್ದಿಲ್ಲ. ಆದರೆ ಗುಂಪಿನಲ್ಲಿ ಪ ಬಲವಾದ ಒಂದು ಪ್ರಾಂತ ಇನ್ನೊಂದು ಪ್ರಾಂತಕ್ಕೆ ಒಪ್ಪಿಗೆಯಿಲ್ಲದ ಅದಕ್ಕೆ ಹಾನಿಕರವಾಗುವ ಘಟನೆಯನ್ನು ಕೇವಲ ಸಂಖ್ಯಾಬಲದಿಂದ ಹೊರಿಸಬಹುದು ಮತ್ತು ಚುನಾವಣೆ ಪದ್ಧತಿಯ ಬಗ್ಗೆ ಕೆಲ ಕಲಮುಗಳನ್ನು ಸೇರಿಸಿ ಮುಂದೆ ಆ ಪ್ರಾಂತ ಗುಂಪಿನಿಂದ ಹೊರಬೀಳಲು ಸಾಧ್ಯವೇ ಆಗದಂತಹ ಪರಿಸ್ಥಿತಿಯನ್ನು ತಂದೊಡ್ಡಬಹುದೆಂಬ ಭಯವನ್ನು ಕಾಂಗ್ರೆಸು ಮಂತ್ರಿತ್ರಯರ ಮುಂದಿಟ್ಟಿತ್ತು. ಯಾವ ಪ್ರಾಂತವನ್ನೂ ಒತ್ತಾಯಕ್ಕೊಳಪಡಿಸದೆ ಹಿಂದೀ ಘಟನೆಯಾಗಬೇಕೆಂಬ ತತ್ವಕ್ಕೆ ಕಾಂಗ್ರೆಸ್ಸು ಮೊದಲಿಂದಲೂ ಅಂಟಿಕೊಂಡಿತ್ತು ಎಂದು ಆ ಹೇಳಿಕೆಯಲ್ಲಿ ಕಾರ್ಯಸಮಿತಿ ಸ್ಪಷ್ಟಗೊಳಿಸಿದೆ.

#### ವಾಯಿಸರಾಯರ ಭರವಸೆ

ಜೂನ ೧೫ ಕ್ಕೆ ವಾಯಿಸರಾಯರು ಮೌ. ಅಬುಲ ಕಲಮ ಅಝಾದರಿಗೆ ಬರೆದ ಒಂದು ಪತ್ರವನ್ನು ಕಾಂಗ್ರೆಸು ಎತ್ತಿ ತೋರಿಸಿದೆ. ಅದರಲ್ಲಿ ಗುಂಪುಗಳನ್ನು ಒತ್ತಾಯದಿಂದ ರಚಿಸುವ ಉದ್ದೇಶವಿಲ್ಲೆಂದೂ ಪ್ರಾಂತಗಳ ಪ್ರತಿನಿಧಿಗಳು ಗುಂಪಿನಲ್ಲಿ ಕುಳಿತ ನಂತರ ಅವರು ಪ್ರಾಂತಿಕ ಗುಂಪುಗಳನ್ನು ರಚಿಸಬೇಕೋ ಬೇಡವೋ ಎಂಬುದನ್ನು ನಿರ್ಣಯಿಸಬೇಕಾಗಿದೆಯೆಂದೂ ಬರೆಯಲಾಗಿತ್ತು. ಇದರಿಂದ ಗುಂಪುಗಳ ಘಟನೆಯ ರಚನೆಗೆ ಅಷ್ಟು ಮಹತ್ವವಿಲ್ಲ ಆದರೆ ಪ್ರಾಂತಗಳು ಗುಂಪಾಗಿ ಕುಳಿತು ಪ್ರಾಂತಿಕ ಘಟನೆಯನ್ನು ರಚಿಸಿಕೊಳ್ಳುವದೇ ಮಹತ್ವದ್ದೆಂಬ ತತ್ವ ಪುನಃ ದೃಢವಾಯಿತು. ಅಲ್ಲದೆ ಪ್ರಾಂತಿಕ ಸ್ವಾಯತ್ತತೆಯ ಮೂಲ ತಳಹದಿಯ ಮೇಲೆ ಮಂತ್ರಿತ್ರಯರ ಯೋಜನೆ ರಚಿತವಾಗಿರುವದರಿಂದ ಅನುಮುಖ್ಯವಾದ ಗುಂಪುಗಳ ರಚನೆಯ ರೀತಿ ಆ ತತ್ವವನ್ನು ಕಿತ್ತು ಹಾಕಲಾರದೆಂದರಿತು ಕಾಂಗ್ರೆಸ್ಸು ಮೂಲತತ್ವಕ್ಕೆ ಬಾಧೆಬಾರದ ರೀತಿಯಲ್ಲಿ ಗುಂಪಿನ ಕಲಮಿಗೆ ಅರ್ಥ ಹಚ್ಚುವದೇ ಸರಿದಾರಿಯೆಂದು ನಿರ್ಣಯಿಸಿತು. ಮತ್ತು ಸಂದಿಗ್ಧ ಕಲಮುಗಳನ್ನು ಫೆಡರಲ್ ಕೋರ್ಟಿಗೆ ಒಪ್ಪಿಸಲು ಸೂಚಿಸಿತು. ಎಲ್ಲ ಪಕ್ಷಗಳ ಸಹಕಾರ ಸಿಗಲೆಂಬ ಆಶೆಯಿಂದ ಗುಂಪುಗಳಾಗಿ ಕೂಡಲು ಕಾಂಗ್ರೆಸ್ಸು ಒಪ್ಪಿತು.

#### ಆಗೊಂದು ಈಗೊಂದು

ಗುಂಪುಗಳ ಯೋಜನೆಯಿಂದ ಅಸಾಮು ಗಡಿನಾಡು ಪ್ರಾಂತಗಳಿಗೂ ಪಂಜಾಬದ ಶೀಖರಿಗೂ ಹಾನಿಯಾಗುವದೆಂಬ ಮಾತನ್ನು ಅವರೆಲ್ಲರೂ ಮೇ ೨೫ ಕ್ಕೆ ಮಂತ್ರಿತ್ರಯಕ್ಕೆ ಬರೆದು ತಿಳಿಸಿದ್ದರು. ಶೀಖರ ವಿಮಂಚನೆಯನ್ನು ವ್ಯಕ್ತಗೊಳಿಸಿ ಮಾಸ್ಟರ ತಾರಾಸಿಂಗರು ಬರೆದ ಪತ್ರಕ್ಕೆ ಭಾರತ ಮಂತ್ರಿಗಳು ಜೂನ ೧ ಕ್ಕೆ ಕೊಟ್ಟ ಉತ್ತರದಲ್ಲಿ "ಮಂತ್ರಿಶಿಷ್ಟಾಯಿಯವರು ತಮ್ಮ ಘೋಷಣೆಗೆ ಅರ್ಥ ವಿವರಣೆಯನ್ನು ಕೊಡಲು ಅಥವಾ ಹೊಸ ಮಾತು ಸೇರಿಸಲು" ಸಾಧ್ಯವಿಲ್ಲೆಂಬದಾಗಿ ತಿಳಿಸಿದ್ದರು. ಹೀಗೆ ಒಮ್ಮೆ ಸ್ಪಷ್ಟವಾಗಿ ಹೇಳಿದ ನಂತರ ಈಗ ಬ್ರಿಟಿಶ ಸರಕಾರದವರು ಘೋಷಣೆಗೆ ಅರ್ಥವಿವರಣೆಯನ್ನೂ ಹೊಸ ಮಾತುಗಳನ್ನೂ ಅದೂ ಆರು ತಿಂಗಳ ನಂತರ ಸೇರಿಸಿದ್ದಾರೆ. ಈ ನಡುವೆ ಮೂಲ ಘೋಷಣೆಯನ್ನನುಸರಿಸಿ ಎಷ್ಟೋ ಘಟನೆಗಳು ಜರಗಿವೆ, ಜರಗುತ್ತಿವೆ, ಎಂದು ಕಾಂಗ್ರೆಸ್ ಕಾರ್ಯಸಮಿತಿ ಹೇಳಿದೆ.

ಈ ಬಣ್ಣ ಬದಲಿಸುವ ರೀತಿಯನ್ನು ಎತ್ತಿ ತೋರಿಸಿದ್ದು ಬ್ರಿಟಿಶ ಮಂತ್ರಿಗಳ ಮೇಲೆ ಕಾಂಗ್ರೆಸ್ಸು ಹೊರಿಸಿದ ತಪ್ಪುಗಳಲ್ಲಿ ಅತಿ ಗಂಭೀರವೂ ಸ್ವಯಂಸಿದ್ಧವೂ ಆಗಿದೆಯೆನ್ನಬಹುದು.

ಇದಲ್ಲದೆ ಫೆಡರಲ್ ಕೋರ್ಟಿಗೆ ಅರ್ಥ ವಿವರಣೆಗಾಗಿ ಹೋಗುವ ತತ್ವವನ್ನು ಅಗಸ್ಟ ೨೪ನೇ ತಾರೀಖಿನ ದಿನ ವಾಯಿಸರಾಯರು ತಮ್ಮ ಆಕಾಶವಾಣಿ ಭಾಷಣದಲ್ಲಿ ಒಪ್ಪಿಕೊಂಡಿದ್ದಾರೆಂಬ ಅಂಶವನ್ನೂ ಕಾರ್ಯಸಮಿತಿ ಎತ್ತಿ ತೋರಿಸಿದೆ. ಕಾಂಗ್ರೆಸ್ಸು ಯೋಜನೆಯನ್ನೊಪ್ಪಿಸಿಕೊಂಡಿದೆಯೆಂದೂ ಅವರು ಆಗ ಹೇಳಿದ್ದರು. ಲೀಗು ಮಾತ್ರ ಯೋಜನೆಯನ್ನು ಸ್ಪಷ್ಟವಾಗಿ ನಿರಾಕ

೧೩ ನೇ ಪುಟಕ್ಕೆ



# ಅಂತರ್ ರಾಷ್ಟ್ರೀಯ

#### ಚರ್ಚಿಲ್ಲರ ದುಃಖ

ಬ್ರಹ್ಮದೇಶಕ್ಕೆ ಹಿಂದುಸ್ತಾನಕ್ಕೆ ಸಮಾನವಾದ ಸ್ವಾತಂತ್ರ್ಯವನ್ನು ಕೊಡುವ ವಿಚಾರದಲ್ಲಿ ಮಾತುಕತೆ ನಡೆಸಲೆಂದು ಬ್ರಹ್ಮದೇಶದ ಪ್ರಮುಖರನ್ನು ಲಂಡನ್ನಿಗೆ ಕರೆಯಲು ಬ್ರಿಟಿಶ ಸರಕಾರ ನಿರ್ಧರಿಸಿದೆ. ಈ ಬಗ್ಗೆ ಹೇಳಿಕೆ ಹೊರಬಿದ್ದೊಡನೆ ಚರ್ಚಿಲಲ್ಲರ ಒತ್ತಾಯದಿಂದ ಪಾರ್ಲಮೆಂಟಿನಲ್ಲಿ ಚರ್ಚೆಯ ವ್ಯವಸ್ಥೆಯಾಯಿತು. "೧೯೩೧ ರಲ್ಲಿ ಬ್ರಹ್ಮದೇಶವನ್ನು ಹಿಂದುಸ್ತಾನದಿಂದ ಬೇರ್ಪಡಿಸಿದಾಗ ಈ ವಿಚ್ಛೇದದಿಂದ ಬ್ರಹ್ಮದೇಶದ ರಾಜಕೀಯ ಪ್ರಗತಿ ಹಿಂದುಸ್ತಾನಕ್ಕಿಂತ ಹಿಂದೆ ಬೀಳದಂತೆ ನೋಡಿಕೊಳ್ಳುವದಾಗಿ ಬ್ರಿಟಿಶ ಸರಕಾರ ವಚನ ಕೊಟ್ಟಿತ್ತು. ಅಂದಿನಿಂದೀಚೆಗೆ ಹಿಂದುಸ್ತಾನದಲ್ಲಿ ರಾಜಕೀಯ ಮುನ್ನಡೆ ಭರದಿಂದ ನಡೆಯುತಿರುವದರಿಂದ ಬ್ರಹ್ಮೀಯರ ಒತ್ತಾಯ ಬಲವಾಗಿದೆ. ಬ್ರಹ್ಮದೇಶದಲ್ಲಿ 'ಸ್ವರಾಜ್ಯ' ಆದಷ್ಟು ತೀವ್ರಗತಿಯಿಂದ ಸ್ಥಾಪಿಸಲ್ಪಡಬೇಕೆಂದು ಬ್ರಿಟಿಶ ಸರಕಾರದ ಇಚ್ಛೆ. ಹಿಂದುಸ್ತಾನವನ್ನು ಹೇಗೊ ಹಾಗೆಯೆ ಬ್ರಹ್ಮದೇಶವನ್ನಾದರೂ ಆ ದೇಶದ ಜನರ ಇಚ್ಛೆಗ ವಿರುದ್ಧವಾಗಿ ಬ್ರಿಟಿಶ ಸಾಮ್ರಾಜ್ಯದಲ್ಲಿ ಉಳಿಸಿಕೊಳ್ಳುವ ಇಚ್ಛೆನಮಗಿಲ್ಲ" ವೆಂಬ ಅರ್ಥದ ಹೇಳಿಕೆಯನ್ನು ಮುಖ್ಯ ಮಂತ್ರಿ ಅಟ್ಲಿಯವರು ಕೊಟ್ಟರು. ಈ ಚರ್ಚೆಯಲ್ಲಿ ವಿನ್‌ಸ್ಟನ್ ಚರ್ಚಿಲ್ಲರು ಮಾಡಿದ ಭಾಷಣದಿಂದ ಅವರ ಬಗ್ಗೆ ಯಾರಿಗಾದರೂ ದಯೆ ಬರುವಂತಿತ್ತು. ಅವರು ತಮ್ಮ ಅಪ್ಪನ ಕಾಲದ ವೈಭವವನ್ನು ನೆನೆದುಕೊಂಡರು. ಆಗ ಬ್ರಿಟಿಶ ಸಾಮ್ರಾಜ್ಯಕ್ಕೆ ಹೊಸ ಹೊಸ ಭೂಭಾಗಗಳು ಸೇರುವ ಸುವಾರ್ತೆಯನ್ನು ಕೇಳಲೆಂದು ದಿನ ಬೆಳಗಾದರೆ ಪತ್ರಿಕೆಯನ್ನು ಜನರು ಓದಲೇಬೇಕಾಗಿತ್ತು. ಆದರೆ ಇಂದು ಪರಿಸ್ಥಿತಿ ತದ್ವಿರುದ್ಧವಾಗಿದೆ. ಇಂದು ಬೆಳಗ್ಗೆ ಎದ್ದಾಗ ಈ ಸಾಮ್ರಾಜ್ಯದ ಯಾವ ಭಾಗ ಕೈಬಿಟ್ಟು ಹೋಗುತ್ತದೋ ಎಂದು ಕಾತರ ಪಡಬೇಕಾಗಿದೆ. ಸರಕಾರದ ಧೋರಣೆಗೆ ನಮ್ಮ ಸಮ್ಮತಿಯಿಲ್ಲವೆಂದು ಮೊದಲೇ ಹೇಳಿಬಿಡುವೆ. ಹಿಂದುಸ್ತಾನದಲ್ಲಿ ಈ ಧೋರಣೆಯಿಂದಾದ ಅನಾಹುತದ ಪ್ರಾರಂಭ ದೃಶ್ಯಗಳಷ್ಟೇ ಇನ್ನೂ ನಮ್ಮ ಕಣ್ಮುಂದಿವೆ. ಬ್ರಹ್ಮದೇಶದಲ್ಲಿ ಅನಾವಶ್ಯಕವಾಗಿ ಈ ಸಾಮ್ರಾಜ್ಯವಿಘಟನ ಪದ್ಧತಿಯನ್ನು ಮುಂದೊತ್ತಲಾಗುತ್ತಿದೆ. ಇಂದು ಬ್ರಿಟಿಶ ಸಾಮ್ರಾಜ್ಯದ ಅವನತಿ ಮತ್ತು ಅಧಃಪಾತದ ಕತೆಗಳು ನಮಗೆ ದಿನ ಬಳಕೆಯ ಸಂಗತಿಗಳಾಗತೊಡಗಿವೆ. ಬ್ರಿಟಿಶ ಸಾಮ್ರಾಜ್ಯವೂ ಅಮೇರಿಕೆಯ ಸಾಲದಂತೆ ಬಹು ವೇಗದಿಂದ ಕರಗತೊಡಗಿದೆ ಎಂದು ಅವರು ತಮ್ಮ ದುಃಖವನ್ನು ತೋಡಿಕೊಂಡರು. ಅಟ್ಲಿಯವರು ಸಾಮ್ರಾಜ್ಯ ನೌಕೆಯನ್ನು ಕೈಯಾರೆ ಒಡೆದು ಮುಳುಗಿಸುತಿದ್ದಾರೆಂದು ಅವರಿಗನಿಸಿತು.

#### ಅವಿಶ್ವಾಸ ಗೊತ್ತುವಳಿ

ಕಳೆದವಾರ ಪಾರ್ಲಿಮೆಂಟಿನಲ್ಲಿ ವಿನ್‌ಸ್ಟನ್ ಚರ್ಚಿಲ್ಲರು ಬ್ರಿಟಿಶ ಸರಕಾರದ ಮೇಲೆ ನಿಂದಾವ್ಯಂಜಕ ಗೊತ್ತುವಳಿ ತರುವದಾಗಿ ನೋಟೀಸು ಕೊಟ್ಟರು. ಸಾಮ್ಯವಾದಿ ಸರಕಾರ "ಪ್ರಜಾಪೀಡನೆ" ಕೈಕೊಳ್ಳುತಿದೆಯೆಂದು ಅವರ ಆರೋಪವಿತ್ತು. ವಿಷಯ ಮತ್ತೇನೂ ಇರಲಿಲ್ಲ. ಸಾರವಾಕದಲ್ಲೊಬ್ಬ ಬಿಳಿಯ "ರಾಜಾ" ಇದ್ದನಲ್ಲ; ಅವನು ರಾಜ್ಯತ್ಯಾಗ ಮಾಡುವಂತೆ ಒತ್ತಾಯಗೊಳಿಸಿ ಸಾರವಾಕನ್ನು—ಮಿಲಟರಿ ಕಾರಣಗಳಿಗಾಗಿ— ನೇರವಾಗಿ ಬ್ರಿಟಿಶ ಆಳಿಕೆಯ ಕೆಳಗೆ ಈಚೆಗೆ ತರಲಾಗಿತ್ತು. ಈಗ ಆ ಬಿಳಿ ರಾಜನ ಸಂಬಂಧಿಕರು ಈ ಸ್ಥಿತ್ಯಂತರವನ್ನು ಬದಲಿಸಿ ಪುನಃ ತಮ್ಮ ವಂಶ ಪರಂಪರಾಗತ ಹಕ್ಕನ್ನು ಸ್ಥಾಪಿಸಿಕೊಳ್ಳಲು ಹಂಚಿಕೆ ಹಾಕಿದ್ದಾರೆ. ಇಂಥವರಲ್ಲೊಬ್ಬನಾದ, ಹಿಂದಿನ ಬಿಳಿರಾಜನ ಸೋದರಳಿಯ ಅಂಥನಿ ಬ್ರೂಕನನ್ನು ಸಾರವಾಕ ದ್ವೀಪದಲ್ಲಿ ಪ್ರವೇಶಿಸದಂತೆ ಬ್ರಿಟಿಶ ಕೂಲಿಕಾರ ಸರಕಾರ ಪ್ರತಿಬಂಧಿಸಿದೆ. ಪಾರ್ಲಮೆಂಟಿನಲ್ಲಿ ಈ ಪ್ರಶ್ನೆ ಎತ್ತಿದಾಗ ಈ ಮನುಷ್ಯ ಸಾರವಾಕ ಪ್ರಜೆಗಳಲ್ಲಿ ಅಲ್ಲಸಲ್ಲದ ಸಂಶಯಗಳನ್ನುಂಟುಮಾಡಿ ತೊಂದರೆ ಎಬ್ಬಿಸಲು ಹೋಗುತ್ತಿರುವದರಿಂದ ಅವನ ಪ್ರವೇಶವನ್ನು ಪ್ರತಿಬಂಧಿಸಲಾಗಿದೆಯೆಂದು ಉತ್ತರ ಕೊಡಲಾಯಿತು. ಆದರೂ ಬಿಳಿ ಮನುಷ್ಯನೊಬ್ಬನ ಓಡಾಟಗಳನ್ನು ಹೀಗೆ ನಿರ್ಬಂಧಿಸುವದು ಚರ್ಚಿಲ್ಲರಿಗೂ ಅವರ ಅನುಯಾಯಿಗಳಿಗೂ ಪ್ರಜಾ ಪೀಡನೆ, ದಬ್ಬಾಳಿಕೆಯಾಗಿ ಕಾಣಿಸಿತು. ಅದಕ್ಕಿಷ್ಟು ಬೊಬ್ಬಾಟ. ಹಿಂದೀ ಪ್ರಜೆಗಳನ್ನು ಹಿಂದುಸ್ತಾನದಲ್ಲಿ ಎಷ್ಟೆಷ್ಟು ನಿರ್ಬಂಧಗಳಿಗೊಳಪಡಿಸಲಾಗಿದ್ದರೂ ಅದರಬಗ್ಗೆ ಚಕಾರ ಎತ್ತಿದವರು ಪಾರ್ಲಮೆಂಟಿನಲ್ಲಿ ಅಪರೂಪ.

#### ಫ್ರೆಂಚ ರಾಜಕಾರಣ

ಇದೀಗ ಫ್ರಾನ್ಸ ದೇಶದ ಮೇಲ್ಮನೆಯ ಅಧಿವೇಶನ ಸೇರಿದ್ದು "ನಾಲ್ಕನೆ ಪ್ರಜಾ ರಾಜ್ಯ" ಘಟನೆ ಆಚರಣೆಗೆ ಬಂದಂತಾಗಿದೆ. ಈ ಮೇಲ್ಮನೆಗೆ ಕೆಲವೊಂದು ವಿಶೇಷಾಧಿಕಾರವುಂಟು. ಯಾವುದಾದರೊಂದು ಕಾಯಿದೆ ಕೆಳಮನೆಯಲ್ಲಿ ತೀರ್ಗಡೆಯಾಗಿದ್ದರೂ ಅದು ಅಸ್ತಿತ್ವಕ್ಕೆ ಬರುವದನ್ನು ತಡೆದು ಪುನಃ ಕೆಳಮನೆಗೆ ಪುನರ್ವಿಚಾರಕ್ಕಾಗಿ ಕಳಿಸಬಲ್ಲದು. ಆದರೆ ಕೊನೆಗೆ ಅಂಥ ಕಾಯದೆಯನ್ನು ಪಾಸುಮಾಡದಂತೆ ತಡೆಯಲು ಅದಕ್ಕೆ ಅಧಿಕಾರವಿಲ್ಲ. ಈಗ ರಾಷ್ಟ್ರಪತಿಯನ್ನು ಅಥವಾ ಪ್ರಜಾರಾಜ್ಯದ ಅಧ್ಯಕ್ಷನನ್ನು ಆರಿಸುವ ಎತ್ನುಗಡೆ ನಡೆದಿದೆ. ಈ ಅಧ್ಯಕ್ಷನಿಗೆ ಅಮೇರಿಕೆಯ ಅಧ್ಯಕ್ಷನಿಗಿರುವಂಥ ಅಸೀಮ ಅಧಿಕಾರಗಳಿಲ್ಲದಿದ್ದರೂ ಮುಖ್ಯ ಮಂತ್ರಿಯನ್ನು ಆರಿಸುವ, ಮಂತ್ರಿಮಂಡಲ ಸಭೆಗಳಲ್ಲಿ ಅಧ್ಯಕ್ಷತೆ ವಹಿಸುವ ಮತ್ತು ಪ್ರಮುಖ ಸರಕಾರಿ ಕಾಗದಪತ್ರಗಳನ್ನು ನೋಡುವ ಹಕ್ಕಿರುವದರಿಂದ ಫ್ರೆಂಚ ರಾಜಕಾರಣದಲ್ಲಿ ಅವನಿಗೆ ತಕ್ಕಮಟ್ಟಿಗೆ ಪ್ರಭಾವವಿದ್ದೇತೀರುವದು. ಈ ಅಧ್ಯಕ್ಷತೆಗೆ ನಿಲ್ಲುವ ಹುರಿಯಾಳುಗಳಾರೆಂದು ಇನ್ನೂ ಅಧಿಕೃತವಾಗಿ ಗೊತ್ತಾಗಿಲ್ಲ. ಹಿಂದೊಮ್ಮೆ ಮುಖ್ಯಮಂತ್ರಿಯಾಗಿದ್ದು ಪ್ರತಿಭಟನ ಚಳವಳಿಯಲ್ಲಿ ಕೆಲಸ ಮಾಡಿದ ಹ್ಯಾರಿಯಟ (ರ್‍ಯಾಡಿಕಲ ಪಕ್ಷ) ಮತ್ತು ಇನ್ನೊಬ್ಬ ಭೂತಪೂರ್ವ ಮಂತ್ರಿ ಇನ್ಸೆಂಟ ಆರಿಯೋಲ ಇವರಿಬ್ಬರು ಸದ್ಯಕ್ಕೆ ಸೂಚಿಸಲ್ಪಟ್ಟಿದ್ದಾರೆ. ಎರಡೂ ಶಾಸನ ಸಭೆಗಳು ಸೇರಿ ಜತೆ ಅಧಿವೇಶನದಲ್ಲಿ ಆರಿಸಬೇಕಾದ ಈ ಅಧ್ಯಕ್ಷತೆಗೆ ಜನರಲ್ ಡಿ. ಗಾಲನೇ ಆರಿಸಿಬಂದರೂ ಬರಬಹುದು.

#### ಇಂಡೋಚೀನದಲ್ಲಿ ಯುದ್ಧ

ಫ್ರೆಂಚ ಸಾಮ್ರಾಜ್ಯಕ್ಕೆ ಸೇರಿದ ಇಂಡೋಚೀನದಲ್ಲಿ, ಡಚ್ಚರ ಇಂಡೋನೇಶಿಯಾದಲ್ಲಿ ಅದಂತೆ ಪ್ರಬಲ ಸ್ವಾತಂತ್ರ್ಯ ಚಳವಳಿಯೊಂದು ಯುದ್ಧಕಾಲದಲ್ಲಿ ಬೆಳೆದು ಬಂದಿತ್ತು. ಫ್ರೆಂಚರು ಮರಳಿ ಬಂದಾಗ ಈ ಚಳವಳಿ ಸಶಸ್ತ್ರವಾಗಿ ಎದುರಾದುದರಿಂದ ಕೆಲಕಾಲ ಹೆಣಗಿ ಕೊನೆಗೆ ಇಂಡೋಚೀನದ "ವೀಟನಾಮ" ಸ್ವತಂತ್ರ ಪ್ರಜಾರಾಜ್ಯಕ್ಕೆ ತಾತ್ಪೂರ್ತಿಕ ಮನ್ನಣೆಕೊಟ್ಟು ಫ್ರೆಂಚರು ಒಡಂಬಡಿಕೆ ಮಾಡಿಕೊಂಡಿದ್ದರು. ಆದರೆ ಈ ಒಡಂಬಡಿಕೆಯ ಕೆಲವು ಅಂಶಗಳು ಉಭಯತರಿಗೂ ಅತೃಪ್ತಿಕರವಾಗಿದ್ದವು. ಕೋಚಿನ್-ಚೀನ ಭಾಗವನ್ನು ಪ್ರಜಾರಾಜ್ಯ ಭಾಗದಿಂದ ಪ್ರತ್ಯೇಕವಾಗಿರಿಸಿದ್ದು ವೀಟನಾಮಕ್ಕೆ ಯಾವಾಗಲೂ ಅಸಂತೋಷಕರವಾಗಿಯೆ ಇತ್ತು. ಅದರ ಅಸಾಧಾರಣ ಪ್ರಕೃತಿ ಸಂಪತ್ತಿಯಿಂದ ವಂಚಿತವಾಗಲು ಯಾವಾಗಲೂ ಅದು ಸಿದ್ಧವಿರಲಿಲ್ಲ. ಅತ್ತ ಫ್ರೆಂಚರೂ ಕಳೆದು ಹೋಗುತಿರುವ ಸಾಮ್ರಾಜ್ಯವನ್ನು ನೆನಸಿಕೊಂಡು ಬೇಗುದಿಕೊಳ್ಳುತ್ತಿದ್ದರು. ಹೀಗಾಗಿ ಅಲ್ಲಿದ್ದ ಫ್ರೆಂಚ ಸೈನ್ಯಕ್ಕೂ ವೀಟನಾಮ ಬಲಗಳಿಗೂ ಹೋರಾಟ ಈಗ ಕೆಲ ದಿನಗಳ ಹಿಂದೆ ಪ್ರಾರಂಭವಾಗಿ ಈಗ ಭಯಂಕರ ಪ್ರಮಾಣಕ್ಕೆ ಮುಟ್ಟಿದೆ. ಹನಾಯಿಯಲ್ಲಿ ನಡೆದ ಹೋರಾಟದಲ್ಲಿ ಅನೇಕ ಫ್ರೆಂಚರಿಗೆ ಸಾವುನೋವುಗಳಾಗಿ ಫ್ರೆಂಚ ಹಾಯ ಕಮೀಶನರನಾದ ಸಂಟೆನಿಗೆ ವಿಶೇಷ ಗಾಯಗಳಾದವು ಒಂದು ಕಡೆಯಂತೂ ಫ್ರೆಂಚ ಸೈನಿಕರು ಶರಣು ಹೋಗಬೇಕಾಯಿತು. ಈ ಪರಿಸ್ಥಿತಿಯಿಂದ ಫ್ರೆಂಚ ಪ್ರತಿಷ್ಠೆಗೆ ತಣ್ಣೀರೆರಚಿದಂತಾಗಿ ಫ್ರೆಂಚ ಮುಖ್ಯ ಮಂತ್ರಿ ಲಿಯಾನಬ್ಲಮ್ ಅವರು ವಿಯಟನಾಮದ ವಿರುದ್ಧ ಪ್ರಬಲ ಬಲಗಳನ್ನು ಕಳಿಸಿದ್ದಾರೆ. ಉತ್ತರ ಆಫ್ರಿಕೆಯಿಂದ ಅತ್ಯುತ್ತಮ ಕೊಡೆ ವೈಮಾನಿಕ ದಳವನ್ನೂ ಇತರ ಪಡೆಗಳನ್ನೂ ಕಳಿಸಲಾಗಿದೆಯಲ್ಲದೆ ಉತ್ತರ ಆಫ್ರಿಕೆಯ ಯುದ್ಧದಲ್ಲಿ ಹೆಸರುಗಳಿಸಿದ್ದ ಜನರಲ್ ಲೆಕ್ಲೆರ್ಕರನನ್ನು ಇಂಡೋಚೀನಕ್ಕೆ ವರ್ಗಾಯಿಸಲಾಗಿದೆ. ಇಂಡೋಚೀನದಲ್ಲಿ ಶಾಂತಿ ಸ್ಥಾಪನೆಯಾದ ಮೇಲೆಯೇ ಮಾತುಕತೆ ನಡೆಸಲು ಸಾಧ್ಯವಿದೆಯೆಂದು ಸಾಮ್ಯವಾದಿ ಬ್ಲಮ್ಮರು ಕೊಟ್ಟ ಹೇಳಿಕೆಗೆ ಫ್ರೆಂಚ ಶಾಸನ ಸಭೆಯ ಎಲ್ಲ ಪಕ್ಷಗಳ ಸಮ್ಮತಿ ದೊರಕಿದೆ. ಫ್ರೆಂಚ ಸರಕಾರ "ನಿಷ್ಠುರ" ಧೋರಣೆ ವಹಿಸುವದಾದರೂ ಶಾಂತಿ ಸ್ಥಾಪನೆಯಾದ ನಂತರ ಸ್ವತಂತ್ರ ಪ್ರಜಾ ರಾಜ್ಯವನ್ನು ಸ್ಥಾಪಿಸಲು ನೆರವಾಗುವದಾಗಿ ಬ್ಲಮ್ಮರು ಹೇಳಿದಾಗ ಡಿಗಾಲೆಯ ಪಕ್ಷದ ಸಾಮ್ರಾಜ್ಯ ವಾದಿ ಸದಸ್ಯರು ಸಿಟ್ಟಿಗೆದ್ದು ಕೂಗಾಡಿದರು. ಸಾಮ್ಯವಾದಿ ಬ್ಲಮ್ಮರ ನಿಷ್ಠುರತೆಗೆ ಅತ್ಯಾಧುನಿಕ ಶಸ್ತ್ರಾಸ್ತ್ರ ಸಜ್ಜಿತ ವಿಯಟನಾಮ ಪ್ರತಿನಿಧಿಗಳು, ಬಲಾತ್ಕಾರದಿಂದ ವಿಯಟ್ ನಾಮದ ಮೇಲೆ ನಿರ್ಣಯ ಹೇರಲು ಫ್ರೆಂಚರು ಯತ್ನಿಸಿದರೆ ಎರಡು ಕೋಟಿ ಸ್ತ್ರೀಪುರುಷರನ್ನು ಅವರು ಎದುರಿಸಬೇಕಾಗುವದೆಂದು ಎಚ್ಚರಿಸಿದ್ದಾರೆ. ಈ ಹೋರಾಟವನ್ನು ಫ್ರೆಂಚ ಸಾಮ್ರಾಜ್ಯವಾದಿಗಳು ಬೇಕೆಂದೇ ಪ್ರಾರಂಭಿಸಿದ್ದರೆಂದೂ ಹಿಂದುಸ್ತಾನದ ಬಹಿರಂಗ ಸಹಾನುಭೂತಿ ವಿಯಟ್ ನಾಮದ ಪರವಾಗಿ ವ್ಯಕ್ತಗೊಳಿಸಲ್ಪಡಬೇಕೆಂದೂ ಪಂ. ಜವಾಹರ, ಜಿನ್ನಾಸಾಹೇಬ ಮೊದಲಾದವರಿಗೆ ಅಂತರ್-ಏಶಿಯಾ ಪರಿಷತ್ತಿಗಾಗಿ ಬಂದ ಇಂಡೊ-ಚೀನಿ ಪ್ರತಿನಿಧಿ ಶ್ರೀ ಚೌ ಅವರು ಪ್ರಾರ್ಥಿಸಿದ್ದಾರೆ. ಸ್ವಾತಂತ್ರ್ಯಾಪೇಕ್ಷಿಗಳ ಕೈಯಲ್ಲಿ ಪ್ರಬಲ ಅಧುನಿಕ ಆಯುಧಗಳಿರುವದರಿಂದ ಅವರು ಬೇಗನೆ ಬಗ್ಗುವ ಸಂಭವವಿಲ್ಲವೆಂದು ಫ್ರೆಂಚರೆ ಒಪ್ಪುತ್ತಾರೆ.

#### ಜನರಲ್ ಸ್ಮಟ್ಸರ ಭಯ

ಯುಕ್ತ ರಾಷ್ಟ್ರಾಧಿವೇಶನದಿಂದ ಮಾತೃಭೂಮಿಗೆ ಮರಳಿದ ಜನರಲ್ ಜಾನ್ ಸ್ಮಟ್ಸರು ಪ್ರಿಟೋರಿಯಾದಲ್ಲಿ ಮಾಡಿದ ಭಾಷಣದಲ್ಲಿ ನಿರಾಶೆ ತುಂಬಿತ್ತು. ಅವರು ದ. ಆಫ್ರಿಕೆಯ ಬಿಳಿಯರಿಗೆ ಕೆಲವು ನಿಷ್ಠುರ ಸತ್ಯಗಳನ್ನು ತಿಳಿಹೇಳಿದರು. ಜಗತ್ತಿನ ಜನಸಂಖ್ಯೆಯಲ್ಲಿ ಮೂರರಲ್ಲಿ ಎರಡಂಶ ಕರಿಯರು ಅಥವಾ ಬಿಳಿಯರಲ್ಲದವರು. ಯುಕ್ತ ರಾಷ್ಟ್ರಸಭೆಯೊಂದು ಬಗೆಯ ಮಾನವ ಕುಲದ ಪಾರ್ಲಮೆಂಟು. ಅಲ್ಲಿ ನಮ್ಮ ಮಾತುಗಳಿಗೆ ಬಹುಮತ ಬಿಡಿರಿ, ನೂರಕ್ಕೆ ೫೦ ರಷ್ಟು ಬೆಂಬಲ ಕೂಡ ಸಿಗುವ ಸಂಭವವಿಲ್ಲ ಇದು ದಕ್ಷಿಣ ಆಫ್ರಿಕೆಗೆ ಮಾತ್ರವಲ್ಲ ಇದಿ ಯುರೋಪಿಗೆ ಎದುರಾದ ಸಮಸ್ಯೆ, ಎಂದರವರು. ಬಿಳಿಯನ ವೈಭವದ ಅವಸಾನ ಕಾಲ ಸಮಿಪಿಸಿದೆಯೆಂದೂ ಅವರಿಗೆ ಭಯವಾಗದಿರಲಿಲ್ಲ. "ಬಿಳಿಯರು ಎಂದಿನಿಂದಲೂ ಪ್ರಭುಗಳಾಗಿದ್ದವರು ಇನ್ನೂ ಆಗಿದ್ದಾರೆ. ಆದರೆ ಇನ್ನೆಷ್ಟುದಿನ ಅವರ ಆಳ್ವಿಯೊ ಯಾರಿಗೆ ಗೊತ್ತು." ದಕ್ಷಿಣ ಆಫ್ರಿಕೆಯ ಬಿಳಿಯರ ಬಗೆಗೆ ಅವರು ಬಹಳ ಚಿಂತಿತರಾಗಿದ್ದರು. "ಈ ತತ್ವವನ್ನು (ಜನಾಂಗಗಳ ಸಮತೆಯನ್ನು) ದಕ್ಷಿಣ ಆಫ್ರಿಕೆಗೆ ಅನ್ವಯಿಸಿದರೆ ೨೦ ಲಕ್ಷ ಬಿಳಿಯರ ಸುತ್ತ ೧೫ ಕೋಟಿ ಕಂದು ಜನರು ಮುತ್ತಿರುವದನ್ನು ಕಾಣುವಿರಿ" ಎಂದರವರು. "ಎಲ್ಲ ವಿಧದಲ್ಲಿ ಸಮಾನತೆ ಇರಬೇಕಾದರೆ ನಾವೆಲ್ಲಿ? ನಾವು ಗಂಟುಮೂಟೆ ಕಟ್ಟುವದೇ ಒಳಿತಲ್ಲವೆ? ಈ ತತ್ವ ದಕ್ಷಿಣ ಆಫ್ರಿಕೆಗೆ ಸರಿಹೋಗುವದಿಲ್ಲ. ಯುಕ್ತರಾಷ್ಟ್ರ ಸಂಘದಲ್ಲಿ ಮಾನವನ ಸಮತೆಯ ಭಾವನೆ ಪ್ರಬಲವಾಗಿತ್ತು. ಆದರೆ ನಾವು ಬೆಳೆದು ಬಂದ ರೀತಿಯೆ ಬೇರೆ!" ಬಿಳಿಯರಲ್ಲದವರ ಮೇಲೆ ಈ ಬಗೆಯ ಭಯವನ್ನು ವ್ಯಕ್ತಗೊಳಿಸಿದ್ದಲ್ಲದೆ ಯುಕ್ತರಾಷ್ಟ್ರ ಸಂಘದಿಂದ ತಮಗೆ ಅನ್ಯಾಯವಾಯಿತೆಂದೂ ಭಾವನಾವಶರಾಗಿ ಪ್ರತಿನಿಧಿಗಳು ತಮ್ಮ ನ್ಯಾಯವಾದ ಮನವಿಯನ್ನು ಲೆಕ್ಕಿಸಲಿಲ್ಲೆಂದೂ ಆದರೆ ಇದು ಕೊನೆಯ ನಿರ್ಣಯವಲ್ಲ. ಯುಕ್ತರಾಷ್ಟ್ರಸಂಘದಲ್ಲಿ ಈ ಪ್ರಶ್ನೆ ಇನ್ನೊಮ್ಮೆ ಏಳುವದು ನಿಶ್ಚಿತವೆಂದೂ ಅವರು ಸಾರಿದರು. ಇದರ ಅರ್ಥ ಯುಕ್ತರಾಷ್ಟ್ರಸಂಘದ ಆದೇಶವನ್ನು ಸ್ಮಟ್ಸರು ತಿರಸ್ಕರಿಸುವರೆಂದೊ ಏನೋ! ಆದರೆ ತಮ್ಮ ಭಾಷಣದಲ್ಲಿ ಅವರು ಬಿಳಿಯರಲ್ಲದವರಿಗೆ ದಕ್ಷಿಣಆಫ್ರಿಕೆಯಲ್ಲಿ ನ್ಯಾಯ ದೊರೆತಿಲ್ಲವೆಂಬ ಅಂಶವನ್ನು ಪರ್ಯಾಯದಿಂದ ಒಪ್ಪಿಕೊಂಡರು.

#### ಚೀನದ ರಾಜ್ಯಘಟನೆ

ಚೀನದ ಘಟನಾ ಸಮಿತಿಯ ಸಭೆ ಕಮ್ಯುನಿಸ್ಟರು ಬಹಿಷ್ಕಾರ ಹಾಕಿದ್ದರೂ ಭರದಿಂದ ಮುಂದೆ ಸಾಗಿದೆ. ತಿದ್ದುಪಡಿಯಾದ ಹೊಸ ಘಟನೆಯ ಎರಡು ವಾಚನಗಳು ಈಗಾಗಲೆ ಮುಗಿದಿದ್ದು ಮೂರನೆ ವಾಚನವೂ ಇಷ್ಟರಲ್ಲೆ ಮುಗಿಯುವಂತೆ ಕಾಣುವದು. ಜನೆವರಿ ೧ ಕ್ಕೆ ಈ ಹೊಸ ಘಟನೆ ಕಾಯಿದೆಯಾಗುವದು. ಅಕ್ಟೋಬರ ೧೦ ಅಥವಾ ನವೆಂಬರ ೧೨ ದಿನದಿಂದ ಅದು ಆಚರಣೆಯಲ್ಲಿ ಬರಬಹುದು. ಈ ಹೊಸ ಘಟನೆಯಲ್ಲಿ ಈಗಿರುವ ಕೌಮಿಂಟಾಂಗ ಏಕತಂತ್ರಾಧಿಕಾರದ ಸೂತ್ರ ಹೋಗಿ ಪಾಶ್ಚಿಮಾತ್ಯ ಪ್ರಜಾತಂತ್ರ ಮತ್ತು ಚೀನಿ ಪ್ರಜಾರಾಜ್ಯ ಪಿತಾಮಹ ಸನ್‌ಯತ್ ಸೇನರ ಸೂತ್ರಗಳ ಸರಿ ಬೆರಿಕೆಯಿರುವದೆಂದು ಹೇಳಲಾಗಿದೆ. ಚಿಯಾಂಗ ಕೈಶೇಕರು ತಮ್ಮ ಸರ್ವಾಧಿಕಾರಿತ್ವವನ್ನು ಬಿಟ್ಟುಕೊಟ್ಟಿದ್ದಾರೆ. ಆದರೆ ಈಗ ಘಟನಾ ಸಮಿತಿಗೆ ಬಹಿಷ್ಕಾರ ಹಾಕಿರುವ ಕಮ್ಯೂನಿಸ್ಟರು ದಾಳಿ ಹೂಡಿದ್ದು ಅವರಿಗೆ ಸಾಕಷ್ಟು ಯಶಸ್ಸೂ ದೊರಕಿದೆಯೆಂದು ತಿಳಿಯುತ್ತದೆ. ಈ ಬಗೆಯಾಗಿ ಚೀನದ ಅಂತರ್ಯುದ್ಧ ಪರಿಸ್ಥಿತಿ ಯಥಾ ಪ್ರಕಾರ ಸಾಗಿದೆ.

#### ಜಪಾನದಲ್ಲಿ ಭೂಕಂಪ

ಕಳೆದ ವಾರ ಜಪಾನದಲ್ಲಿ ಎರಡು ಪ್ರಚಂಡ ಭೂಕಂಪಗಳಾದವು. ಭೂಕಂಪಗಳು ಜಪಾನಕ್ಕೆ ಹೊಸ ದುರ್ದೈವವೇನೂ ಅಲ್ಲದಿದ್ದರೂ ೧೯೨೩ ರಿಂದೀಚೆಗೆ ಇಂಥ ಭಯಾನಕ ಭೂಕಂಪವಾದುದಿಲ್ಲ. ತಾ ೨೨ ಕ್ಕೆ ಕೇಂದ್ರ ಮತ್ತು ದಕ್ಷಿಣ ಜಪಾನವೆಲ್ಲ ಈ ಭೂಕಂಪದಿಂದ ನಡುಗಿತು. ೬೩೭ ಜನ ಸತ್ತಿರಬೇಕೆಂದೂ ೬೪೬ ಜನರಿಗೆ ಗಾಯವಾಗಿರಬೇಕು ೪೬೬೩ ಮನೆಗಳು ಬಿದ್ದಿರಬೇಕೆಂದೂ ಲೆಕ್ಕಹಾಕಲ್ಪಟ್ಟಿದೆ. ಇದು ಸಾಲದ್ದಕ್ಕೆ ಶಿಕೋಕು ದ್ವೀಪದ ತಗ್ಗು ಭೂಮಿ ಸಾಗರದ ಉಬ್ಬರದಿಂದ ೬ ಫೂಟು ನೀರುಕ್ಕಿ ಬಂದು ಮುಳುಗಿ ಹೋಯಿತು. ಎಲ್ಲ ಸಂಪರ್ಕ ಸಾಧನಗಳು ಹಾಳಾಗಿ ಹೋಗಿದ್ದವು. ಅದಾಗಿ ೨೪ ತಾಸುಗಳೊಳಗೆ ಎರಡನೆ ಕಂಪವಾಯಿತು. ಅದೇ ದ್ವೀಪದ ಇನ್ನೊಂದು ಭಾಗಕ್ಕೆ ಅದರಿಂದ ಧಕ್ಕೆಯಾಗಿದೆ. ಮೊದಲನೆ ಭೂಕಂಪ ಕಾರಣದಿಂದ ವಾಕಯಾಮಾ ನಗರದಲ್ಲಿ ಅತರ್ಕ್ಯ ಹಾನಿಯಾಗಿದೆಯಲ್ಲದೆ ಅದರ ಹೊರಗೆ ೫ ಲಕ್ಷ ಜನರು ಮನೆಮಾರು ಕಳೆದುಕೊಂಡಿದ್ದಾರೆಂದು ತಿಳಿಯುತ್ತದೆ. ಲಕ್ಷಾಂತರ ನಿರಾಶ್ರಿತರು ಎತ್ತತ್ತಲೂ ಹೋಗುತಿದ್ದಾರೆ. ಅದೇ ದ್ವೀಪದ ಕ್ಯುರೇ ಬಂದರದಲ್ಲಿದ್ದ ಬ್ರಿಟಿಶ ಆಕ್ರಮಣ ಸೇನೆಗೆ ಸ್ವಲ್ಪ ಹಾನಿಯಾಗಿದೆ.

೦ ೦ ೦

"ಅತ್ಯುತ್ತಮ ಬೆಳೆ ಬಂದಿದ್ದರೂ ಹಡಗ ಪರಿಸ್ಥಿತಿ ಸುಧಾರಿಸಿದ್ದರೂ ಜಾಗತಿಕ ಆಹಾರ ಬಿಕ್ಕಟ್ಟು ಇನ್ನೂ ಪೂರ್ಣ ಹಿಡಿತಕ್ಕೆ ಬಂದಿಲ್ಲವೆಂದು ಅಮೇರಿಕೆಯ ಒಕ್ಕಲತನ ಸಂಸ್ಥೆ ಸಾರಿದೆ.

೦ ೦ ೦

ನೆರೆಹೊರೆಯ ರಾಷ್ಟ್ರಗಳು ಉತ್ತರ ಗ್ರೀಸದಲ್ಲಿ ನಡೆದಿರುವ ಕೂಟ ಯೋಧರ ಉಪಟಳಕ್ಕೆ ಸಹಾಯಮಾಡುತ್ತಿವೆಯೆಂದು ಗ್ರೀಸು ಯುಕ್ತರಾಷ್ಟ್ರ ಭದ್ರತಾಮಂಡಲಕ್ಕೆ ಕೊಟ್ಟ ದೂರನ್ನು ಪರಿಶೀಲಿಸಲು ಭದ್ರತಾಮಂಡಲ ಸಮಿತಿಯೊಂದನ್ನು ನೇಮಿಸಿ ಅದು ಸಂಬಂಧಿಸಿದ ಭೂಭಾಗಗಳಲ್ಲಿ ಸಂಚರಿಸಿ ವರದಿಮಾಡಬೇಕೆಂದು ನಿರ್ಣಯಿಸಿದೆ.

೦ ೦ ೦

ಸ್ವಿಝರ್ಲಂಡಿನಲ್ಲಿ ನಡೆದ ಅಂತರ್ ರಾಷ್ಟ್ರೀಯ ಯಹೂದ್ಯ ಪರಿಷತ್ತಿನಲ್ಲಿ ಬರುವ ತಿಂಗಳ ಲಂಡನ್ನಿನಲ್ಲಿ ನೆರೆಯುವ ಅರಬ ಯಹೂದ್ಯ ಪರಿಷತ್ತಿಗೆ ಬಹಿಷ್ಕಾರ ಹಾಕಬೇಕೆಂದು ನಿರ್ಣಯವಾಗಿದೆ. ಹೀಗೆ ಅರಬ ಯಹೂದ್ಯರು ಒಂದೆಡೆ ಸೇರುವದು ಅಸಾಧ್ಯವಾಮುವದರಿಂದ ಪಾಲಿಸ್ತಾನ ವಿಭಜನೆಯ ಯೋಜನೆಯನ್ನು ಮುಂದೊತ್ತಲು ಬ್ರಿಟಿಶ ನಿರ್ಣಯಿಸಿರುವದಂತೆ.

# ಘಟನಾ ಸಮಿತಿಗಳು— ಅವು ಸೇರಿದ ಬಗೆ— ಕೆಲಸ ಮಾಡಿದ ಬಗೆ—

## ಬೆಲ್ಜಿಯಂ

೧೮೩೦ ರಲ್ಲಿ ಬೆಲ್ಜಿಯಂ ರಾಜ್ಯ ಅದನ್ನಾಳುತಿದ್ದ ನೆದರ್ಲಂಡ್ಸ (ಹಾಲಂಡ) ಅರಸನ ವಿರುದ್ಧ ಬಂಡು ಹೂಡಿತು. ಬಂಡೆದ್ದವರು ಮಾಡಿದ ಮೊದಲನೆ ಕೆಲಸವೆಂದರೆ ಒಂದು ತಾತ್ಪೂರ್ತಿಕ ಸರಕಾರ ರಚಿಸಿದ್ದು. ಅದರಲ್ಲಿ ಪ್ರಮುಖ ಜನರಿದ್ದರು. ಅವರು ಬ್ರುಸೆಲ್ಸದಲ್ಲಿ ಸೇರಿದರು. ಬ್ರುಸೆಲ್ಸದಲ್ಲಿ ದಂಗೆಯೆದ್ದ ಪ್ರಜೆಗಳ ಅಪ್ಪಣೆಯಲ್ಲದೆ ಬೇರಾವ ಕಾಯಿದೆಯ ಬೆಂಬಲವೂ ಅವರಿಗಿದ್ದಿಲ್ಲ.

ಆ ಸರಕಾರ ನಾಲ್ಕು ಜನರ ಕೇಂದ್ರ ಸಮಿತಿಯೊಂದನ್ನು ನೇಮಿಸಿ ತನ್ನ ಅಧಿಕಾರಗಳನ್ನೆಲ್ಲ ಅದಕ್ಕೆ ವರ್ಗಾಯಿಸಿತು. ಆ ಸಮಿತಿ ಒಡನೆ ಒಂದು ಅಜ್ಞೆ ಹೊರಡಿಸಿ ಬೆಲ್ಜಿಯಂ ಪ್ರಾಂತಗಳನ್ನು ಬಲತ್ಕಾರದಿಂದ ಹಾಲಂಡಿನಿಂದ ಪ್ರತ್ಯೇಕಿಸಿ ಬೇರೊಂದು ರಾಜ್ಯವಾಗಿ ಸ್ಥಾಪಿಸಲ್ಪಡುವದೆಂದೂ ಕೇಂದ್ರ ಸಮಿತಿ ಅದಷ್ಟು ಬೇಗನೆ ಘಟನಾಮಸೂದೆಯನ್ನು ಸಿದ್ಧಗೊಳಿಸುವದೆಂದೂ ಬೆಲ್ಜಿಯಮದ ಎಲ್ಲ ಪ್ರಾಂತಗಳ ಪ್ರತಿನಿಧಿಗಳನ್ನೊಳಗೊಂಡ ಒಂದು ರಾಷ್ಟ್ರೀಯ ಪರಿಷತ್ತು ಕರೆಯಲ್ಪಡುವದೆಂದೂ ಸಾರಿತು. ಆ ಪರಿಷತ್ತು ಮಸೂದೆಯನ್ನು ಪರಿಶೀಲಿಸಿ ಅವಶ್ಯಕ ಬದಲಾವಣೆಗಳನ್ನು ಮಾಡಿ ಬೆಲ್ಜಿಯಮದಲ್ಲೆಲ್ಲ ಆ ಘಟನೆಯನ್ನು ಆಚರಣೆಗೆ ತರುವದೆಂದು ತಿಳಿಸಲ್ಪಟ್ಟಿತು.

೨೦೦ ಸದಸ್ಯರ ರಾಷ್ಟ್ರೀಯ ಪರಿಷತ್ತು ಒಡನೆ ಆರಿಸಲ್ಪಟ್ಟು ನವೆಂಬರ ೧೮೩೦ರಲ್ಲಿ ಸಭೆಸೇರಿತು. ಜನತೆಯ ಸಾರ್ವಭೌಮತ್ವದ ತತ್ವವನ್ನನುಸರಿಸಿ ಆ ಪರಿಷತ್ತಿಗೆ ರಾಜ್ಯದ ಘಟನೆಯನ್ನು ನಿರ್ಮಿಸುವ, ಅಜ್ಞೆಗಳನ್ನು ಹೊರಡಿಸುವ, ಕಾಯಿದೆಗಳನ್ನು ಮಾಡುವ ಅಧಿಕಾರ ದೊರೆಯಿತು. ತಾತ್ಪೂರ್ತಿಕ ಸರಕಾರ ಅದಕ್ಕೆ ತನ್ನೆಲ್ಲ ಅಧಿಕಾರ ಬಿಟ್ಟುಕೊಡಲಾಗಿ ಅದೇ ನಾಲ್ಕು ಜನರ ಸಮಿತಿ ಪುನಃ ನೇಮಿಸಲ್ಪಟ್ಟು ಪರಿಷತ್ತಿನ ಅಜ್ಞೆಗಳನ್ನು ಆಚರಣೆಗೆ ತರುವ ಹೊಣೆ ಹೊತ್ತಿತು. ಪರಿಷತ್ತು ಮೂರು ತಿಂಗಳಲ್ಲಿ ಘಟನೆಯನ್ನು ಸಿದ್ಧಗೊಳಿಸಿತು ಒಂದು ವಾರದ ಚರ್ಚೆಯ ನಂತರ ಆ ಘಟನೆ ಮಂಜೂರಾತಿ ಹೊಂದಿತು.

ಇದಲ್ಲದೆ ಪರಿಷತ್ತು ಪ್ರಥಮ ಮುಂಗಡ ಪತ್ರವನ್ನೂ ಸರಕಾರ ನಡೆಸಲು ಹಣವನ್ನೂ ಕೆಲ ಹೊಸ ಅವಸರದ ಕಾಯಿದೆಗಳನ್ನೂ ಪಾಸು ಮಾಡಿತು. ಘಟನೆ ಆಚರಣೆಗೆ ಬರುತ್ತಲೆ ಅದರ ಅಧಿಕಾರಾವಧಿ ಮುಗಿಯಿತು. ೧೮೩೧ ರಿಂದೀಚೆಗೆ ಆ ಘಟನೆಯಲ್ಲಿ ಕೆಲ ತಿದ್ದುಪಡಿಗಳಾಗಿವೆ. ೧೯೨೧ ರ ವರೆಗೆ ೨೫ ವಯಸ್ಸಿನ ಪ್ರತಿಯೊಬ್ಬನಿಗೊಂದು ಮತ, ಅವನಿಗೆ ಅಸ್ತಿಯಿದ್ದರೆ ಇನ್ನೊಂದು ಮತ, ವಿದ್ಯಾಯೋಗ್ಯತೆಯಿದ್ದರೆ ಮೂರನೆಯದೊಂದು ಮತ ಇತ್ತು. ಆದರೆ ಅದರಿಂದೀಚೆಗೆ ೨೧ ವಯಸ್ಸಿನ ಪ್ರತಿಯೊಬ್ಬನಿಗೆ ಒಂದೇ ಮತವಿದೆ.

## ಸ್ವಿಝರ್ಲಂಡ

ಮೂಲತಃ ಸ್ವಿಝರ್ಲಂಡು ಸಂಯುಕ್ತ ಕೇಂದ್ರವೇ ಇಲ್ಲದ ಬೇರೆ ಬೇರೆ ಭಾಷೆಗಳ ಅನೇಕ ಸ್ವತಂತ್ರ ಸಾರ್ವಭೌಮ ರಾಜ್ಯಗಳಾಗಿತ್ತು. ಆದರೆ ಬಲಿಷ್ಠ ಶತ್ರುಗಳಿಂದೊದಗುವ ಸಮಾನ ಗಂಡಾಂತರದ ಕಾರಣದಿಂದ ಒಂದು ಒಕ್ಕೂಟ ಸ್ಥಾಪನೆ ಹೊಂದಿತು. ಹೀಗೆ ವಿವಿಧ ರಾಜ್ಯಗಳಿಗೆ ಸಮಾನ ಪ್ರಾತಿನಿಧ್ಯವುಳ್ಳ ಸಂಯುಕ್ತ ಡಾಯಟ ಸಭೆ ಸ್ಥಾಪಿತವಾಯಿತು. ಆದರೆ ಕ್ರಾಂತಿಯ ನಂತರ ಫ್ರೆಂಚರು ಅದನ್ನಾಕ್ರಮಿಸಿದಾಗ ೧೭೯೮ ರಲ್ಲಿ ನೆಪೋಲಿಯನ್ನನು ಅದಕ್ಕೆ ಪ್ರಜಾರಾಜ್ಯ ಘಟನೆಯನ್ನು ಕೊಟ್ಟನು. ಆದರೆ ಪ್ರಾರಂಭದಿಂದಲೇ ಅದು ತಿರಸ್ಕರಿಸಲ್ಪಟ್ಟದ್ದರಿಂದ ೧೮೪೮ ರಲ್ಲಿ ಹೊಸ ಘಟನೆ ಸಿದ್ಧವಾಯಿತು ಅದಕ್ಕೆ ೨೦ ವಯಸ್ಸು ಮೀರಿದ ಪ್ರತಿಯೊಬ್ಬ ನಾಗರಿಕನ ಒಪ್ಪಿಗೆ ದೊರೆಯಬೇಕಾಗಿತ್ತು.

ಆದರಿಂದ ಹಲವು ಘಟನೆಗಳ ವಿಫಲ ಪ್ರಯೋಗವಾಗಿ ೧೮೪೮ರಲ್ಲಿ ಯಾದವೀ ಯುದ್ಧದ ನಂತರ ಏಕೀಕೃತ ಘಟನೆ ಬಂತು.

ಆದರೆ ಅಧಿಕಾರ ಕೇಂದ್ರೀಕರಣದ ಒಲವು ಹೆಚ್ಚಿದ್ದರಿಂದ ೧೮೭೪ ರಲ್ಲಿ ಹೊಸ್ ಘಟನೆಯನ್ನು ಎರಡೂ ಶಾಸನಸಭೆಗಳಲ್ಲಿ ಪಾಸುಮಾಡಿ ಮತ ಕ್ಕೊಪ್ಪಿಸಲಾಯಿತು. ಸಂಯುಕ್ತ ಸರಕಾರಕ್ಕೆ ಸ್ಪಷ್ಟವಾಗಿ ಅಧಿಕಾರವನ್ನು ಒಪ್ಪಿಸದ ಪ್ರಾಂತಗಳು ಸ್ವತಂತ್ರವೆಂದು ಅದರಲ್ಲಿ ಹೇಳಲಾಗಿತ್ತು. ಅಮೇರಿಕೆಯಲ್ಲಿರುವಂತೆ ನೇರವಾದ ಮತದಾನದಿಂದ ಒಂದು ಸಭೆಯನ್ನೂ ಪ್ರಾಂತಗಳ ನಾಮಕರಣದಿಂದ ಇನ್ನೊಂದು ಸಭೆಯನ್ನೂ ಕೇಂದ್ರದಲ್ಲಿ ಸ್ಥಾಪಿಸುವ ಈ ಘಟನೆಗೆ ಒಪ್ಪಿಗೆ ದೊರೆತು ಈ ವರೆಗೆ ಆಚರಣೆಯಲ್ಲಿದೆ. ಹೊಸ ತಿದ್ದುಪಡಿಗಳಾಗಬೇಕಾದರೆ ಜನಮತದ ಸಾಮಾನ್ಯ ಬಹುಮತವೂ ಪ್ರಾಂತಮತಗಳಲ್ಲಿ ಬಹುಮತವೂ ಬೇಕಾಗುವದು.

## ಡೆನ್ಮಾರ್ಕ

೧೯೧೫ ರಲ್ಲಿ ಸ್ಥಾಪಿಸಲ್ಪಟ್ಟ ಡೇನಿಶ ಘಟನೆಗೆ ೧೮೪೯ ರ ಘಟನೆಯೇ ಆಧಾರ. ಸುಮಾರು ೨೦೦ ವರ್ಷಗಳಿಂದ ನಿರಂಕುಶ ರಾಜನ ಆಳಿಕೆಯಲ್ಲಿದ್ದ ಈ ರಾಜ್ಯದ ರಾಜಾ ಏಳನೆ ಫ್ರೆಡ್ರಿಕನ. ಒಂದು ಜನಪ್ರಿಯ ಮಂತ್ರಿಮಂಡಲ ರಚಿಸಿ ಘಟನೆಯನ್ನು ಸಿದ್ಧಗೊಳಿಸ ಹೇಳಿದನು. ಅಯ್ಕೆಯ ಕಾಯಿದೆಯನ್ನು ಮಾಡಿ ಎರಡು ಭವನಗಳ ಘಟನಾಸಮಿತಿಯನ್ನು ಕರೆದನು. ಒಂದು ಭವನದಲ್ಲಿ ಲೋಕನಿಯುಕ್ತರೂ ಇನ್ನೊಂದರಲ್ಲಿ ರಾಜನಿಯುಕ್ತರೂ ಇದ್ದರು. ಅದರಲ್ಲಿ ತಿದ್ದುಪಡಿ ಹೊಂದಿದ ಮಂತ್ರಿಮಂಡಲದ ಘಟನಾಮಸೂದೆಗೆ ೧೮೪೯ ರಲ್ಲಿ ರಾಜಸಮ್ಮತಿ ದೊರಕಿತು.

## ಮೆಕ್ಸಿಕೊ

೧೮೨೪ ರಲ್ಲಿ ಅಮೇರಿಕನ್ ಸಂಯುಕ್ತ ಸಂಸ್ಥಾನಗಳ ಘಟನೆಯನ್ನನುಸರಿಸಿ ಮೆಕ್ಸಿಕನ್ ಕಾಂಗ್ರೆಸ್ಸು ಘಟನೆಯನ್ನು ಸಿದ್ಧಗೊಳಿಸಿದ್ದರೂ ೧೮೫೭ ರ ವರೆಗೂ ಅದು ಕಾಯಿದೆಯಾಗಲಿಲ್ಲ. ೧೮೫೭ ರಲ್ಲಿ ಘಟನಾ ಸಮಿತಿ ಸೇರಿ ೧೨೫ ಕಲಮುಗಳ ಒಂದು ತಾತ್ಪೂರ್ತಿಕ ಘಟನೆಯನ್ನು ಸಾರಿ ಶಾಶ್ವತ ಘಟನೆಯನ್ನು ೧೮೫೭ ರಲ್ಲಿ ಪಾಸು ಮಾಡಿತು. ಅದನ್ನಾಧರಿಸಿಯೇ ಇಂದಿನ ಘಟನೆ ರಚಿಸಲ್ಪಟ್ಟಿದೆ. ಅದು ಅರ್ಧ ಸಂಯುಕ್ತ ಅರ್ಧ ಕೇಂದ್ರೀಕೃತ ಘಟನೆ. ೧೯೧೪ ರ ಅಂತರ್ಯುದ್ಧದ ನಂತರ ೧೯೧೭ ರಲ್ಲಿ ಹೊಸಘಟನೆ ರಚಿಸಲ್ಪಟ್ಟಿತು. ಅದಿನ್ನೂ ಜಾರಿಯಲ್ಲಿದೆ. ನೆಲದಡಿಯಲ್ಲಿರುವ ಸಂಪತ್ತೆಲ್ಲ ಸರಕಾರಕ್ಕೆ ಸೇರಿದ್ದೆಂಬುದು ಈ ಘಟನೆಯಲ್ಲಿರುವ ಒಂದು ವೈಶಿಷ್ಟ್ಯ.

## ಜರ್ಮನಿ

ಉದಾರ ಘಟನೆಯನ್ನನುಸರಿಸಿ ರಾಷ್ಟ್ರೀಯ ಐಕ್ಯವನ್ನು ಸ್ಥಾಪಿಸಬೇಕೆಂಬ ಚಳವಳಿ ಎದ್ದುದರಿಂದ ಜರ್ಮನ ರಾಜಕಾರಣಿಗಳೂ ವಿವಿಧ ಜರ್ಮನ್ ಸಂಸ್ಥಾನಗಳ ಮಂತ್ರಿಗಳೂ ಎಲ್ಲ ಜರ್ಮನ್ ಸಂಸ್ಥಾನಗಳ ಶಾಸನ ಸಭೆಗಳಿಗೆ ಘಟನಾ ಸಮಿತಿಯನ್ನು ಸ್ಥಾಪಿಸುವ ವಿಚಾರ ಮಾಡಲು ೧೮೪೮ ರಲ್ಲಿ ಆಮಂತ್ರಣ ಕಳಿಸಿದರು. ಈ ಸಭೆಯಲ್ಲಿ ೫೦ ಜನರ ಸಮಿತಿಯನ್ನು ನೇಮಿಸಿದರು ಅದು ರಾಷ್ಟ್ರೀಯ ಘಟನಾ ಸಮಿತಿಯನ್ನು ಆರಿಸುವ ವ್ಯವಸ್ಥೆ ಮಾಡಿತು. ಅದು ಒಂದು ಕೇಂದ್ರಾಧಿಕಾರವನ್ನು ಸ್ಥಾಪಿಸಿ ಘಟನೆಯನ್ನು ರಚಿಸತೊಡಗಿತು. ಅತ್ತ ಪ್ರಶಿಯಾದಲ್ಲಿಯ ಇಂಥದೇ ಘಟನಾ ಸಮಿತಿಯೊಂದು ಕೆಲಸ ನಡೆಸಿತ್ತು. ಆದರೆ ಕೊನೆಗೆ ಈ ಸಮಿತಿಗಳು ವಿಫಲವಾದವು ಆ ಮೇಲೆ ಬಿಸ್ಮಾರ್ಕನು ಉತ್ತರ ಜರ್ಮನ್ ಸಂಸ್ಥಾನಗಳನ್ನೆಲ್ಲ ಸಂಯೋಜಿಸುವ ವಿಚಾರ ಮಾಡಲು ಒಂದು ಸಭೆ ಕರೆದನು. ಆ ಸಭೆ ಒಂದು ಕರಡು ಸಿದ್ಧಗೊಳಿಸಿ ವಿವಿಧ ಸಂಸ್ಥಾನಗಳ ಸರಕಾರಗಳಿಗೊಪ್ಪಿಸಿತು. ಸಂಸ್ಥಾನಗಳ ಚುನಾವಣೆಗಳಾಗಿ ಘಟನಾ ಸಮಿತಿ ಆರಿಸಲ್ಪಟ್ಟಿತು. ಅದು ಕರಡನ್ನು ಪಾಸು ಮಾಡಿತು. ವಿವಿಧ ಸಂಸ್ಥಾನಗಳ ಸರಕಾರಗಳು ಅದನ್ನು ಸ್ವೀಕರಿಸಿದ ನಂತರ ಅವುಗಳ ಶಾಸನ ಸಭೆಗಳೂ ಅದನ್ನಂಗೀಕರಿಸಿದವು. ೧೮೬೭ ರಲ್ಲಿ ಅದು ಕೊನೆಯ ಒಪ್ಪಿಗೆ ಪಡೆದು ಮೈನ ನದಿಯ ಉತ್ತರಕ್ಕಿರುವ ಜರ್ಮನ್ ಸಂಸ್ಥಾನಗಳ ಸಂಯುಕ್ತ ರಾಷ್ಟ್ರ ಅಸ್ತಿತ್ವಕ್ಕೆ ಬಂತು.

೧೯೧೮ ರ ಕ್ರಾಂತಿಯಿಂದ ಈ ಘಟನೆ ನಿರ್ನಾಮವಾಯಿತು. ೧೯೧೯ ರ ಎಪ್ರಿಲದಲ್ಲಿ ತಾತ್ಪೂರ್ತಿಕ ಸರಕಾರ ೨೦ ವರ್ಷ ಮೇಲ್ಪಟ್ಟವರೆಲ್ಲರ ಸಾರ್ವತ್ರಿಕ ಪ್ರಮಾಣಬದ್ಧ ಮತದಾನದಿಂದ ಹೊಸ ಘಟನಾಸಮಿತಿಯನ್ನಾರಿಸುವ ಏರ್ಪಾಡು ಮಾಡಿತು. ಆ ಸಮಿತಿ ಆರಿಸಿ ಬಂದೊಡನೆ ಸರಕಾರದ ಎಲ್ಲ ಅಧಿಕಾರಗಳು ಅದಕ್ಕೊಪ್ಪಿಸಲ್ಪಟ್ಟವು. ಅದು ತಾತ್ಪೂರ್ತಿಕ ಘಟನೆಯನ್ನೇರ್ಪಡಿಸಿ ಮುಂದೆ ಶಾಶ್ವತ ಘಟನೆಯನ್ನು ಸಿದ್ಧಗೊಳಿಸಿತು. ತಾತ್ಪೂರ್ತಿಕ ಸರಕಾರ ಅದನ್ನು ಸಾರ್ವಭೌಮ ಸಂಸ್ಥೆಯೆಂದು ಅಂಗೀಕರಿಸಿ ಅದಕ್ಕೆ ಎಲ್ಲ ಅಧಿಕಾರವನ್ನು ಬಿಟ್ಟುಕೊಟ್ಟಿತು.

ಸಂಸ್ಥಾನಗಳ (ಅಥವಾ ಪ್ರಾಂತಗಳ) ಸರಕಾರಗಳ ಪ್ರತಿನಿಧಿಗಳು ತಾತ್ಪೂರ್ತಿಕ ಸರಕಾರದೊಡನೆ ಸೇರಿ ಒಂದು ಕರಡನ್ನು ಸಿದ್ಧಗೊಳಿಸಿ ೧೯೧೯ ರಲ್ಲಿ ರಾಷ್ಟ್ರೀಯ ಶಾಸನ ಸಭೆಗೊಪ್ಪಿಸಿದವು. ಅದು ವಿಶೇಷ ಸಮಿತಿಯನ್ನು ನೇಮಿಸಿ ಅದನ್ನು ಪರಿಶೀಲಿಸಿ ಘಟನಾ ಸಮಿತಿಗೆ ವರದಿ ಮಾಡಿತು. ಈ ಘಟನೆ ಜುಲೈ ೧೯೧೯ ರಲ್ಲಿ ಸ್ವೀಕೃತವಾಯಿತು. ಆ ಮೇಲೆ ಆ ಘಟನಾಸಮಿತಿ ಪ್ರಥಮಶಾಸನ ಸಭೆಯಾಗಬೇಕೆಂದು ನಿರ್ಣಯವಾಯಿತು. ಇದರಿಂದ ವಿಲಂಬ ಉಳಿದು ಅವಶ್ಯಕ ಕಾಯಿದೆಗಳನ್ನು ಬೇಗನೆ ರಚಿಸುವದು ಸಾಧ್ಯವಾಯಿತು.

## ಝೆಕೊಸ್ಲೊವಾಕಿಯಾ

೧೯೧೮ ರಲ್ಲಿ ಮಿತ್ರರಿಗಾದ ವಿಜಯದಿಂದ ಅವರ ಶತ್ರುಗಳ ಅಧೀನ ರಾಷ್ಟ್ರಗಳು ಸ್ವತಂತ್ರವಾದವು. ಝೆಕೊಸ್ಲೊವಾಕಿಯಾ ಅವುಗಳಲ್ಲೊಂದು. ಸೆಪ್ಟೆಂಬರ ೧೮ ರಲ್ಲಿ ರಾಷ್ಟ್ರೀಯ ಕೌನ್ಸಿಲ್ಲು ಸ್ಥಾಪಿಸಲ್ಪಟ್ಟಿತು. ಎರಡು ತಿಂಗಳ ನಂತರ ಇದ್ದ ಭೂಭಾಗದ ಆಡಳಿತೆಯನ್ನು ಅದು ಪ್ರಾರಂಭಿಸಿತು. ಘಟನಾ ಸಮಿತಿಗೆ ಚುನಾವಣೆಗಳನ್ನು ನಡೆಸುವದು ಅಸಾಧ್ಯವಾಗಿದ್ದುದರಿಂದ ಎಲ್ಲ ರಾಜಕೀಯ ಪಕ್ಷಗಳು ಪ್ರತಿನಿಧಿಗಳನ್ನು ನೇಮಿಸಬೇಕೆಂದು ಏರ್ಪಾಡಾಯಿತು. ೧೯೧೮ ರಲ್ಲಿ ಹೀಗೆ ಘಟನಾ ಸಮಿತಿ ಸೇರಿ ಝೆಕೊಸ್ಲೊವಾಕಿಯಾ ಪ್ರಾಂತಗಳನ್ನೆಲ್ಲ ಒಂದು ಪ್ರಜಾತಂತ್ರ ಪ್ರಜಾರಾಜ್ಯವೆಂದು ಸಾರಿತು. ಅದು ಮೊದಲನೆ ಅಧ್ಯಕ್ಷನನ್ನೂ ಆರಿಸಿತು. ಅವನು ಆಜೀವ ಅಧಿಕಾರದಲ್ಲಿರಬೇಕೆಂದು ವಿಧಿಸಲ್ಪಟ್ಟಿತು. ಸಮಿತಿಗೆ ಹೊಣೆಯಾಗಿರುವ ಒಂದು ಮಂತ್ರಿಮಂಡಲವೂ ರಚಿಸಲ್ಪಟ್ಟಿತು. ಮರುವರ್ಷ ಮಂತ್ರಿಮಂಡಲ ಒಪ್ಪಿಸಿದ ಘಟನೆಯನ್ನು ಅದು ವಿಚಾರಿಸತೊಡಗಿದ್ದಲ್ಲದೆ ಅವಶ್ಯಕ ಕಾಯದೆಗಳನ್ನೂ ಮಾಡಿತು.

ಮಂತ್ರಿಮಂಡಲದ ಅಧ್ಯಕ್ಷನೂ ವಿದೇಶ ಮಂತ್ರಿಯೂ ರಾಷ್ಟ್ರಕ್ಕೆ ಸೇರತಕ್ಕ ಭೂಭಾಗದ ಬಗ್ಗೆ ಸಂಧಾನ ನಡೆಸಿದರು ಆ ಶಾಂತಿ ಒಪ್ಪಂದಕ್ಕೆ ಘಟನಾ ಸಮಿತಿ ಒಪ್ಪಿಗೆ ಕೊಟ್ಟಿತು. ಈ ಸಂಧಿಯಿಂದ ಝೆಕೊಸ್ಲೋವಾಕಿಯಾಕ್ಕೆ ಸ್ವತಂತ್ರ ರಾಷ್ಟ್ರದ ಸ್ಥಾನಮಾನ ಸಿಕ್ಕಿತು. ಘಟನೆ ಸಿದ್ಧವಾದ ಮೇಲೆ ೧೯೨೦ ರಲ್ಲಿ ಮೊದಲನೆ ಚುನಾವಣೆಗಳಾದವು. ಝೆಕೊಸ್ಲೊವಾಕಿಯಾದಲ್ಲಿ ರಾಜ್ಯದೊಳಗೊಂದು ರಾಜ್ಯ ನಿರ್ಮಿಸಲ್ಪಟ್ಟದ್ದೊಂದು ವೈಶಿಷ್ಟ್ಯ. ರುಥೆನಿಯಾಕ್ಕೆ ಝೆಕೊಸ್ಲೊವಾಕಿಯಾದೊಳಗೊಂದು ಪ್ರತ್ಯೇಕ ಪಾರ್ಲಿಮೆಂಟು ಆಗಿ ಧಾರ್ಮಿಕ, ಶೈಕ್ಷಣಿಕ, ಭಾಷಾ ಸಂಬಂಧಿ, ಸ್ಥಾನಿಕ ಆಡಳಿತೆ ಮೊದಲಾದ ಅಧಿಕಾರಗಳು ಅದಕ್ಕೆ ಕೊಡಲ್ಪಟ್ಟವು.

## ಇಸ್ಟೋನಿಯಾ

೧೯೧೮ ನವೆಂಬರದಲ್ಲಿ ಜರ್ಮನ್ ಸೇನೆಗಳು ಇಸ್ಟೋನಿಯಾದ ಸರಕಾರದೊಡನೆ ಒಡಂಬಡಿಕೆ ಮಾಡಿಕೊಂಡು ಹಿಂತೆರಳಿದವು ಆಗ ತಾತ್ಪೂರ್ತಿಕ ಸರಕಾರದ ಅಧಿಕಾರಗಳು ವಿಸ್ತರಿಸಲ್ಪಟ್ಟವು. ಅದು ರಾಷ್ಟ್ರೀಯ ಕೌನ್ಸಿಲ್ಲಿನ ಸ್ಥಾನದಲ್ಲಿ ಸಾರ್ವತ್ರಿಕ, ಸಮಾನ, ಪ್ರತ್ಯಕ್ಷ ಮತದಾನ ಪದ್ಧತಿಯಿಂದ ಘಟನಾ ಸಮಿತಿಯ ಆಯ್ಕೆಯನ್ನು ಏರ್ಪಡಿಸಿತು. ೧೯೧೯ ಮೇ ತಿಂಗಳಲ್ಲಿ ಅದು ಕೌನ್ಸಿಲ್ಲಿನ ನಿರ್ಣಯವನ್ನನುಸರಿಸಿ ಇಸ್ಟೋನಿಯಾವನ್ನು ಸ್ವತಂತ್ರ ಪ್ರಜಾರಾಜ್ಯವೆಂದು ಸಾರಿತು. ಜೂನಿನಲ್ಲಿ ಅದೊಂದು ತಾತ್ಪೂರ್ತಿಕ ಘಟನೆಯನ್ನು ಪಾಸು ಮಾಡಿತು. ಆ ಮೇಲೆ ಶಾಶ್ವತ ಘಟನೆಯ ಕರಡು ತಯಾರಿಸಲು ಒಂದು ಚಿಕ್ಕ ಸಮಿತಿಯನ್ನು ನೇಮಿಸಿ ಅದು ಶಾಸನ ಸಭೆಯ ಕೆಲಸಗಳನ್ನು ತಾನೇ ನಿರ್ವಹಿಸತೊಡಗಿತು. ಬಾಲ್ಟಿಕ ಜಮೀನುದಾರರ ಅಸ್ತಿಗಳನ್ನು ರಾಷ್ಟ್ರೀಕರಿಸಿ ರೈತರಿಗೆ ಹಂಚಿತು. ೧೯೨೦ ರಲ್ಲಿ ಸೋವಿಯಟ್ ರಶಿಯಾ ಅದರ ಸ್ವಾತಂತ್ರ್ಯವನ್ನೊಪ್ಪಿ ಒಪ್ಪಂದ ಮಾಡಿಕೊಂಡಿತು. ೧೯೨೦ ರಲ್ಲಿ ಅದು ಘಟನಾ ಕಾಯಿದೆಯನ್ನು ಪಾಸು ಮಾಡಿತು.

## ಆಸ್ಟ್ರಿಯಾ

೧೯೧೮ ರ ಸಂಧಿಯ ನಂತರ ಘಟನಾ ಸಮಿತಿಯನ್ನಾರಿಸಲು ತಾತ್ಪೂರ್ತಿಕ ಸರಕಾರ ಕಾಯದೆ ಪಾಸು ಮಾಡಿತು. ೧೯೧೯ ಮಾರ್ಚದಲ್ಲಿ ಸಮಿತಿ ಸೇರಿತು. ಅದು ಸೇರಿದೊಡನೆ ತಾತ್ಪೂರ್ತಿಕ ಸರಕಾರ ರದ್ದಾಯಿತು. ಘಟನಾಸಮಿತಿ ಕೆಲವೇ ದಿನಗಳಲ್ಲಿ ಅಸ್ಟ್ರಿಯಾವನ್ನು ಜರ್ಮನ ಪ್ರಜಾರಾಜ್ಯದ ಅಂತರ್ಗತ ಪ್ರಜಾತಂತ್ರ ಪ್ರಜಾರಾಜ್ಯವೆಂದು ಸಾರಿತು. ಎರಡು ದಿನಗಳ ನಂತರ ಅದು ರಾಷ್ಟ್ರದ ಸಮಸ್ತಾಧಿಕಾರಗಳನ್ನು ಕೈಕೊಂಡಿತು. ಆ ಘಟನಾ ಸಮಿತಿಗೆ ಘಟನಾ ನಿರ್ಮಾಣವಲ್ಲದೆ, ಶಾಂತಿ ಒಪ್ಪಂದದ ಸಂಧಾನ ನಿರುದ್ಯೋಗ, ಪಿಡುಗು, ಚಲಾವಣೆ ಮೊದಲಾದ ಹಲವು ಸಮಸ್ಯೆಗಳು ಎದುರುಬಿದ್ದಿದ್ದವು. ೧೯೨೦ ರಲ್ಲಿ ಘಟನೆ ಸಿದ್ಧವಾಗಿ ಜರ್ಮನಿಯಲ್ಲಿ ಅದು ಅಂತರ್ಗತವಾಗಲು ಮಿತ್ರರು ಒಪ್ಪದ್ದರಿಂದ ಸ್ವತಂತ್ರ ಸಂಯುಕ್ತ ಪ್ರಜಾತಂತ್ರ ಪ್ರಜಾರಾಜ್ಯವಾಯಿತು.

## ಪೋಲಂಡ

೧೯೧೮ ರಲ್ಲಿ ಸಂಧಿಯಾದ ನಂತರ ರಾಷ್ಟ್ರದ ಮುಖ್ಯನು ಘಟನಾ ಸಮಿತಿಯನ್ನು ಕರೆದನು. ಅದು ಸೇರಿದಾಗ ಪೋಲಿಶ ಪ್ರಜಾರಾಜ್ಯ ಕಾಯಿದೆಯ ಮೂಲತತ್ವಗಳನ್ನು ಸಿದ್ಧಗೊಳಿಸಿ ನಡುಗಾಲ ಘಟನೆಯೊಂದನ್ನು ಸಾರಿತು. ರಾಷ್ಟ್ರದ ಮುಖ್ಯನು ತನ್ನ ಅಧಿಕಾರಗಳನ್ನು ಘಟನಾ ಸಮಿತಿಗೆ ಬಿಟ್ಟುಕೊಟ್ಟನು ಅದು ಅವನನ್ನೇ ಪುನಃ ನೇಮಿಸಿ ಕೆಲ ನಿಯಂತ್ರಣಗಳಿಗೊಳಪಡಿಸಿತು. ಘಟನಾ ಸಮಿತಿ ಒಂದು ಚಿಕ್ಕ ಉಪಸಮಿತಿಗೆ ಘಟನೆಯನ್ನು ಸಿದ್ಧಗೊಳಿಸುವ ಕೆಲಸ ಒಪ್ಪಿಸಿ ತಾನು ಯುದ್ಧವಿಧ್ವಸ್ತ ರಾಜ್ಯದ ಪುನರ್ರಚನೆಯಲ್ಲಿ ಆಸಕ್ತವಾಯಿತು. ಉಪಸಮಿತಿ ಸಿದ್ಧಗೊಳಿಸಿದ ಘಟನೆಯನ್ನು ಸಮಿತಿ ಚರ್ಚಿಸಿ ತಿದ್ದುಪಡಿಯ ಸಲುವಾಗಿ ಪುನಃ ಉಪಸಮಿತಿಗೆ ಕಳಿಸಿತು. ಕೊನೆಗೆ ಅಣಿಯಾದ ಘಟನೆಯನ್ನು ಮಾರ್ಚ ೧೯೨೧ ರಲ್ಲಿ ಸ್ವೀಕರಿಸಲಾಯಿತು. ಆದರೆ ಘಟನಾಸಮಿತಿ ಮತ್ತೂ ಮಹತ್ವದ ಅನೇಕ ಕಾಯಿದೆಗಳನ್ನೂ ಅರ್ಥಿಕಸುಧಾರಣೆಗಳನ್ನೂ ಮಾಡುತ್ತಲೇ ಇತ್ತು.

## ಯುಗೊಸ್ಲಾವಿಯಾ

೧೯೨೦ ನವೆಂಬರದಲ್ಲಿ ದೇಶದ ಸಮಸ್ತ ಭಾಗಗಳಲ್ಲಿ ಘಟನಾ ಸಮಿತಿಯ ಮಹಾ ಚುನಾವಣೆಗಳಾದವು. ಅದಕ್ಕೆ ಘಟನೆ ರಚಿಸುವದಲ್ಲದೆ ಬೇರೆ ಅವಶ್ಯಕ ಕಾಯದೆಗಳನ್ನು ಮಾಡುವ ಹಕ್ಕು ಕೊಡಲ್ಪಟ್ಟಿತ್ತು. ಘಟನೆಗೆ ಸಂಬಂಧಿಸಿದ ಎಲ್ಲ ಹೊಣೆಗಳನ್ನು ನಿರ್ವಹಿಸಲು ಒಂದು ವಿಶೇಷ ಸಮಿತಿ ನೇಮಿಸಲ್ಪಟ್ಟಿತು. ೧೯೨೧ ಜೂನದಲ್ಲಿ ಅದು ಸಿದ್ಧಗೊಳಿಸಿದ ಘಟನೆ ಪಾಸಾಯಿತು. ವಿವಿಧ ಪ್ರಾಂತಗಳಲ್ಲಿ ವಿವಿಧ ಧರ್ಮ, ರೂಢಿ, ಪದ್ಧತಿಗಳಿದ್ದುದರಿಂದ ಕಾಯಿದೆಗಳಲ್ಲಿದ್ದ ವೈವಿಧ್ಯವನ್ನು ಏಕೀಕರಿಸುವಗೋಸುಗ ಘಟನಾ ಸಮಿತಿಯನ್ನು ಶಾಸನ ಸಮಿತಿಯಾಗಿ ಪರಿವರ್ತಿಸಲಾಯಿತು. ಈ ಸಮಿತಿ ಆಡಳಿತ ಗಡಿಗಳನ್ನೂ ಶಿಕ್ಷಣ ಪದ್ಧತಿಯನ್ನೂ ಸುಧಾರಿಸಿತು. ಅದರ ಸೂಚನೆಗಳನ್ನು ಮೂಲ ಘಟನಾ ಸಮಿತಿ ಸೇರಿ ಒಪ್ಪಿಕೊಂಡು ಆ ಮೇಲೆ ಅದೇ ರಾಷ್ಟ್ರದ ಪ್ರಥಮ ಶಾಸನ ಸಭೆಯಾಗಿ ಮುಂದೆ ಸಾಗಿತು. ಹೀಗೆ ಅದರ ಕಾರ್ಯದಲ್ಲಿ ಎಲ್ಲಿಯೂ ಬಿರುಕು ಬರಲಿಲ್ಲ.





ಕರ್ಮವೀರ
# ಹರಿಜನ ಪುರವಣಿ

## ದಕ್ಷಿಣ ಆಫ್ರಿಕೆ ಏನು ಮಾಡುವದು?

ಶ್ರೀಮತಿ ವಿಜಯಲಕ್ಷ್ಮಿಯವರ ನೇತೃತ್ವದಲ್ಲಿ ಯುಕ್ತರಾಷ್ಟ್ರ ಸಭೆಗೆ ನಡುಗಾಲ ಸರಕಾರದವರು ಕಳಿಸಿದ ಶಿಷ್ಟಮಂಡಲದವರು ನಿಶ್ಚಯವಾಗಿಯೂ ಪರಿಣಾಮಕರ ಕಾರ್ಯವನ್ನು ಅಸಾಧಾರಣ ಸಾಮರ್ಥ್ಯದಿಂದ ಮಾಡಿತೋರಿಸಿ ಯಶಸ್ವಿಗಳಾಗಿದ್ದಾರೆ. ಶ್ರೀಮತಿ ವಿಜಯಲಕ್ಷ್ಮಿ ಪಂಡಿತರು ನ್ಯೂಯಾರ್ಕದಿಂದ ಕಳಿಸಿದ ಈ ಕೆಳಗಿನ ತಂತಿಯಿಂದ ಅದು ಸ್ಪಷ್ಟವಾಗುತ್ತದೆ.

“ಇಂದು ನಿಮ್ಮ ಆಶೀರ್ವಾದ ಬಲದಿಂದ ದಕ್ಷಿಣಾ ಅಫ್ರಿಕಾ ಹಿಂದೀಯರ ಕಾರಣದ ನ್ಯಾಯ್ಯತೆ ಸಮಿತಿಯಲ್ಲಿ ೨೪ ವಿರುದ್ಧ ೧೯ ಮತಗಳಿಂದ ಪ್ರಸ್ಥಾಪಿತವಾಯಿತು. ಸಭೆ ಮುಗಿದ ನಂತರ ಜನರಲ್ ಸ್ಮಟ್ಸರ ಬಳಿ ಹೋಗಿ ಕೈಕುಲುಕಿಸಿದೆ. ನಾನು ಪ್ರತಿಪಾದಿಸಿದ ರೀತಿಯನ್ನು ಅವರು ಪ್ರಶಂಸಿಸಿದರು.”

ಈಗ ದಕ್ಷಿಣ ಅಫ್ರಿಕಾ ಯೂನಿಯನ್ನಿನ ಪಾರ್ಲಮೆಂಟೂ ಆ ದೇಶದ ಯುರೋಪಿಯನ್ ಸಾರ್ವಜನಿಕರೂ ಯಾವ ಬಗೆಯಲ್ಲಿ ನಡೆದುಕೊಳ್ಳುವರೆಂಬುದನ್ನು ನೋಡುವದೊಂದು ಉಳಿದಿದೆ. “ಪರಿಶಿಷ್ಟ ವರ್ಗಗಳು” (Scheduled Castes) ಎಂದು ಕಾಯಿದೆಯಲ್ಲಿ ಕರೆಯಲ್ಪಡುವ ತನ್ನ ಅಸ್ಪೃಶ್ಯರನ್ನು ಹಿಂದುಸ್ತಾನ ನಡೆಸಿಕೊಳ್ಳುವ ರೀತಿ ದಕ್ಷಿಣ ಅಫ್ರಿಕೆಯಲ್ಲಿ ಏಶಿಯಾಟಿಕರನ್ನು ಏಕೆ ಅಫ್ರಿಕನ್ ಜನರನ್ನು ಕೂಡ ನಡೆಸಿಕೊಳ್ಳುವ ರೀತಿಗಿಂತಲೂ ಎಷ್ಟೋ ಕೀಳಾಗಿದೆಯೆಂದು ಹಿಂದೀ ಶಿಷ್ಟಮಂಡಲವನ್ನು ಮೂದಲಿಸಲು ಜನರಲ್ ಸ್ಮಟ್ಸರಿಗೆ ಸಾಧ್ಯವಾಯಿತು. ಫೀಲ್ಡ ಮಾರ್ಶಲ ಸ್ಮಟ್ಸರ ಮೂದಲಿಕೆಯಲ್ಲಿ ಸತ್ಯಾಂಶವಿದ್ದಿದ್ದರೆ ಅದಕ್ಕಾಗಿ ಅವರಿಗೆ ಸೈ-ಸೈ ಎನ್ನಬಹುದಾಗಿತ್ತು. ದಕ್ಷಿಣ ಅಫ್ರಿಕೆಯಲ್ಲಿ ಏಶಿಯಾಟಿಕ ಜನರನ್ನು ನಡೆಸಿಕೊಳ್ಳುವ ಕಾಯದೆಬದ್ಧ ರೀತಿ ಕಾಲಕಾಲಕ್ಕೆ ಕೆಡುತ್ತ ಹೋಗಿ ಈಗ ಅಸಹನೀಯತೆಯ ಗಡಿಗೆ ಮುಟ್ಟಿದೆಯೆಂದು ಹೇಳಿದರೆ ಸತ್ಯವನ್ನೇ ಹೇಳಿದಂತಾಯಿತು. ಯೂನಿಯನ್ ಸರಕಾರ ಹಿಂದುಸ್ತಾನ ಸರಕಾರಕ್ಕೆ ಕೊಟ್ಟ ಅಭಿವಚನಗಳಲ್ಲಿ ಪ್ರತಿಯೊಂದೂ ಮುರಿಯಲ್ಪಟ್ಟದೆಯೆನ್ನಬಹುದು. ಇತ್ತ ಹಿಂದುಸ್ತಾನದಲ್ಲೋ, “ಪರಿಶಿಷ್ಟ ವರ್ಗಗಳ” ವಿರುದ್ಧ ಪಕ್ಷಪಾತದ ಕಾಯಿದೆಯೊಂದೂ ಯಾವಾಗಲೂ ಇದ್ದಿಲ್ಲ. ಬದಲಿಗೆ ಕಾಯಿದೆಯಲ್ಲಿ “ಪರಿಶಿಷ್ಟ ವರ್ಗ”ಗಳಿಗೆ ಸಂರಕ್ಷಣೆ ಕೊಡುವ ನೀತಿಯೇ ಇದೆಯೆಂದು ಪ್ರಮಾಣಪೂರ್ವಕ ಸಿದ್ಧಮಾಡಿ ತೋರಿಸಬಹುದು. ನನಗೆ ಗೊತ್ತಿದ್ದಮಟ್ಟಿಗೆ ಪರಿಶಿಷ್ಟ ವರ್ಗಗಳು ಹಿಂದುಸ್ತಾನದಲ್ಲಿರುವ ಅತಿಶ್ರೇಷ್ಠ ಮನುಷ್ಯನಿಗೆ ಸಮಾನವಾಗಿವೆಯೆಂದು ತಿಳಿಯಲು ಯಾವ ಕಾಯಿದೆಯ ಆತಂಕವೂ ಇಲ್ಲ. ಆದರೆ ಈ ಅಸ್ಪೃಶ್ಯರಿಗೆ ಕಾಯಿದೆಯಿಂದ ದಯಪಾಲಿಸಲ್ಪಟ್ಟ ಹಕ್ಕುಗಳನ್ನು ಧಾರ್ಮಿಕ ರೂಢಿಗಳು ಕಸಿದುಕೊಂಡಿವೆಯೆಂಬುದೂ ಕೆಲವೊಮ್ಮೆ ರೂಢಿಯೇ ಕಾಯಿದೆಗಿಂತ ಬಲವಾಗಿರುವದೆಂಬುದೂ ಸಂಪ್ರದಾಯಶೀಲ ಹಿಂದೂತ್ವಕ್ಕೂ ಸನಾತನಿ ಹಿಂದುಗಳಿಗೂ ಲಜ್ಜಾವಹವಾದ ಸತ್ಯವಾಗಿದೆ ನಿಜ. ಆದರೆ ಈ ಅನಾಗರಿಕ ರೂಢಿಯ ವಿರುದ್ಧ ಸಾರ್ವಜನಿಕ ಅಭಿಪ್ರಾಯ ದಿನದಿನಕ್ಕೆ ತೀಕ್ಷ್ಣವಾಗುತಿದೆ. ಈ ರೂಢಿ ಇಂದೋ ನಾಳೆಯೋ ಅಳಿಯುವದು ಖಂಡಿತ. ಆದುದರಿಂದ, ಹಿಂದುಸ್ತಾನದಲ್ಲಿ ಯಾರೂ ಸರಿಯೆಂದು ವಾದಿಸದಿರುವ ಮತ್ತು ಜನಾಭಿಪ್ರಾಯಕ್ಕೆ ದಿನೇ ದಿನೇ ಎರವಾಗುತಿರುವ ರೂಢಿಗಳ ಸಂಶಯಾಸ್ಪದ ಪ್ರಯೋಜನವನ್ನು ಪಡೆಯುವ ಗೊಡವೆಗೆ ಹೋಗದೆ ದಕ್ಷಿಣ ಅಫ್ರಿಕೆಯ ಯುರೋಪಿಯನ್ನರು, ಯುಕ್ತರಾಷ್ಟ್ರ ನಿರ್ಣಯಕ್ಕೂ ಜಾಗತಿಕ ಜನಾಭಿಪ್ರಾಯಕ್ಕೂ ಏನಾದರೂ ಸಂಬಂಧವಿರುವದಾದರೆ ಖಚಿತವಾಗಿಯೂ ಆ ಅಭಿಪ್ರಾಯ ಯುರೋಪಿಯನ್ನರ ಈ ವಿಕಾರಗ್ರಸ್ತ ಕಾಯಿದೆಗೆ ವಿರುದ್ಧವಾಗಿರುವದನ್ನು ಮನಗಾಣಲೆಂದು ಹಾರೈಸೋಣ.

ಶ್ರೀರಾಮಪುರ — ಮೋ. ಕ. ಗಾಂಧಿ

೧೨—೧೨—೪೬

## ಹೊಳೆಯುವದೆಲ್ಲ ಚಿನ್ನವಲ್ಲ

ಕತ್ತಲು ಕವಿದೊಡನೆ, ಕಿಸಾನ ಆಶ್ರಮಕ್ಕೆ ಮಸೂರಿಯ ದೀಪಗಳು ಪರ್ವತದ ಕೊರಳಿನ ಸುದೀರ್ಘ ವಿದ್ಯುತ್‌ದಾಮದಂತೆ ಚಕಚಕಿಸುವದು ಕಾಣಿಸುತ್ತದೆ. ಅಲ್ಲಿ ಬೆಳಕಿಡಿದ ದಿವ್ಯವಾದ ಮನೆಗಳಿವೆ; ಮಾರುಮಾರಿಗೆ ವಿದ್ಯುದ್ದೀಪಸ್ತಂಭಗಳಿಂದ ಪ್ರಕಾಶಮಾನವಾಗಿರುವ ಮೋಟಾರ ಹಾಗು ರಿಕ್ಷಾ ರಸ್ತೆಗಳಿವೆ; ಪೂರ್ವಪಶ್ಚಿಮಗಳ ಸಮಸ್ತ ಮೋಡಿ ಸಿಂಗಾರಗಳಿಂದೊಡಗೂಡಿದ ಝುಗ್ಗೆಂಬ ಅಂಗಡಿಗಳ ಸಾಲು, ಸಿನೇಮಾಗಳು, ನೃತ್ಯಾಲಯಗಳು — ಎಲ್ಲವೂ ಉಜ್ವಲವಾಗಿ, ಸ್ವಚ್ಛವಾಗಿ ಮರೆಯುತಿವೆ. ಆದರೆ ಈ ಆನಂದ ತುಂದಿಲವಾದ ಜಗತ್ತನ್ನು ಸ್ವಚ್ಛವಾಗಿರಿಸುವವರೊ?- ಅವರು ಕತ್ತಲು ತುಂಬಿದ, ನೀರು ಒಸರುವ ಮನೆಗಳಲ್ಲಿ ಸಾರ್ವಜನಿಕ ಮೂತ್ರಾಶಯ ಪಾಯಖಾನೆಗಳ ಸಾಮೀಪ್ಯದಲ್ಲಿ ಧರಣಿಯಲ್ಲಿರುವ ಉಪ್ಪಿನಕಾಯಿಯಂತೆ ವಾಸಿಸುತ್ತಾರೆ. ಅಲ್ಲಿ ವಿದ್ಯುದ್ದೀಪಗಳಿಲ್ಲ; ಬಚ್ಚಲು ಮನೆಗಳಿಲ್ಲ; ಅನಿರ್ಮಲತೆ, ದುಃಖ ಇವು ಹೊರತು ಬೇರೇನೂ ಇಲ್ಲ.

ಶಾರೀರಿಕ ಅಥವಾ ಅನಿರ್ಮಲ ಕೆಲಸಗಳನ್ನು ಮಾಡಿ ಅರಿಯದ ಶ್ರೀಮಂತರಿಗೆ ಮೀಯುವ ಕೆರೆಗಳೇನು, ತೊಟ್ಟಿಗಳೇನು, ನಳಗಳೇನು, ಅಂಗವಸ್ತ್ರಗಳೇನು, ಸಾಬೂನೇನು! ಆದರೆ ಅವರ ಪಾಯಖಾನೆಗಳನ್ನೂ ಪೀಕದಾನಿಗಳನ್ನೂ ಶುದ್ಧಮಾಡುವವರಿಗೆ, ಅವರ ಹೊಲಸುಗಳನ್ನು ಹೊತ್ತುಕೊಂಡು ಹೋಗುವವರಿಗೆ ಮಾತ್ರ ಸ್ನಾನಕ್ಕೂ ಬಟ್ಟೆ ಒಗೆಯುವದಕ್ಕೂ ಕುಡಿಯುವದಕ್ಕೂ ಹೊಲಸು ಕೊಳದ ಹೊರತು ಬೇರೇನೂ ಇಲ್ಲ ಮತ್ತು ಆ ಹೊಲಸು ಕೊಳವೆಂದರೆ, ಕಾರುಣಿಕ ಪಾತಕನೇ, ಅವರು ತಮ್ಮ ಭಂಗಿ ಕೆಲಸದ ಎಲ್ಲ ಹೊಲಸು ಬಕೀಟು, ಡಬ್ಬಿಗಳನ್ನು ತೊಳೆಯುವ ನಳ ಅಥವಾ ಚರಂಡಿಯಲ್ಲದೆ ಬೇರಾವುದೂ ಅಲ್ಲ!!

ಓ ಮಸೂರಿಯ ಶ್ರೀಮಂತ ಜನಗಳಿರಾ! ನಿಮ್ಮ ಆರಾಮ ಜೀವನದ ರೀತಿನೀತಿಗಳಿಂದ ಯಾವ “ಜಾಡಮಾಲಿ”ಗಳ ಅವಶ್ಯಕತೆಯುಂಟಾಗಿದೆಯೋ ಮತ್ತು ಯಾರು ನಿಮ್ಮ ಸುಂದರ ಭವನಗಳನ್ನು ಪರಿಶುದ್ಧವಾಗಿಯೂ ನಿರ್ಮಲವಾಗಿಯೂ ಇಡುವರೋ ಅಂಥ ಮಾನವ ಪ್ರಾಣಿಗಳ ಪಾಲಿಗೆ ಬಂದ ವಸತಿಗಳನ್ನು ನೋಡಲು ನನ್ನ ಸಂಗಡ ಬರುವಿರಾ?

ಓರಣವಾದ ಪೇಟೆಯಿಂದ ಹೊರಬಿದ್ದು, ಈ ಇಳಿಜಾರಾದ ಇಕ್ಕಟ್ಟಿನ ದಾರಿಯಲ್ಲಿ ಇಳಿದು ಬನ್ನಿರಿ—ಅಲ್ಲಿ ದೀಪವಿಲ್ಲ, ಇರುಳಲ್ಲಿ ಅಲ್ಲಿ ನಡೆಯುವದು ಅಪಾಯಕರವೆನ್ನುತ್ತಾರೆ, ಎಚ್ಚರಿಕೆ! ಇಲ್ಲಿದೆ ವಸತಿಗೃಹಗಳ ಒಂದು ಸಾಲು. (ಮಸೂರಿಯಲ್ಲಿ ಅಂಥ ವಸತಿಗಳು ಹೆಚ್ಚು ಕಡಿಮೆ ಇಪ್ಪತ್ತಿವೆ.) ಹಾಂ, ನೀವು ಮೂಗು ಹಿಡಿಯುತ್ತೀರಿ-ಏಕೆಂದರೆ ಇಲ್ಲಿ ಉದ್ದಕ್ಕೂ ಸಾರ್ವಜನಿಕ ಪಾಯಖಾನೆಗಳಿವೆ. ಆದರೆ ಈ ಕೋಣೆಗಳಲ್ಲೊಂದರೊಳಗೆ ಇಣಿಕಿರಿ. ಅದಕ್ಕೆ ಕಿಟಕಿಗಳಿಲ್ಲವಾದುದರಿಂದ ಸಹಸಾ ನಿಮಗೆ ಏನೂ ಕಾಣುವದಿಲ್ಲ ನಿಜ. ಒಳಗೆ ಕಾಲಿಡಲು ಹಿಂದೆ ಮುಂದೆ ನೋಡುತ್ತೀರಾ? ಛೀ ಛೀ ನೀವು ಒಳಗೆ ಬರಲೇಬೇಕು. ಎಚ್ಚರಿಕೆ! ಬಾಗಿಲ ಸಂದಿಯಲ್ಲೇ ಇರುವ ಒಲೆಯಲ್ಲಿ ದುರ್ದೈವಿ ಸ್ತ್ರೀಯೊಬ್ಬಳು ಸುಡಲೆತ್ನಿಸುತಿರುವ ರೊಟ್ಟಿಯ ಮೇಲೆ ಎಲ್ಲಾದರೂ ಕಾಲಿಟ್ಟೀರಿ! ಅಲ್ಲದೆ ಆ ಒಲೆಯ ಮೇಲಿನ ವರೆಗೂ ಪಸರಿಸಿದಂತಿರುವ ಹಾಸಿಗೆಯ ಮೇಲೆಲ್ಲಾದರೂ ಮುಗ್ಗರಿಸಿಬಿದ್ದೀರಿ! ಆ ಹಾಸಿಗೆ ಸುಟ್ಟು ಹೋಗದ್ದೇ ದೊಡ್ಡ ಚಮತ್ಕಾರ! ಈಗ ಈ ಅರೆಬೆಳಕಿನಲ್ಲಿ ಕಾಣುವ ಅಭ್ಯಾಸ ನಿಮ್ಮ ಕಣ್ಣಿಗೆ ಆಗಿರಬೇಕು ಕೋಣೆಯ ಎಲ್ಲ ಬದಿಗೂ ಕಣ್ಣಾಡಿಸಿರಿ ಇನ್ನೆಷ್ಟು ಹಾಸಿಗೆಗಳು, ಹಳೆ ಪೆಟ್ಟಿಗೆಗಳು, ಬುಟ್ಟಿಗಳು, ಹರಕು ಬಟ್ಟೆಗಳು ಎಲ್ಲವೂ ಒಂದೇ ರಾಶಿಯಲ್ಲಿ ನೂಕು ನುಗ್ಗಲಾಗಿ ಬಿದ್ದಿವೆ. ಅಲ್ಲಲ್ಲಿ ಮಾನುಷ ಜೀವಿಗಳು ಹೇಗೋ ಹೇಗೋ ಕುಳಿತುಕೊಂಡಿರುವದನ್ನೂ ಕಾಣುವಿರಿ. ಈ ಕೋಣೆಯ ಆಕಾರವನ್ನು ಅಂದಾಜು ಮಾಡೋಣ ೧೨ ಫೂಟ ಅಗಲ ೧೫ ಫೂಟ ಉದ್ದ ಇದ್ದರೆ ಬಹಳವಾಯಿತು. ಅದರಲ್ಲಿ ವಾಸಿಸುವ ಜನರೋ ಎಷ್ಟು ಮಂದಿ? ಹದಿನೈದು ಸ್ತ್ರೀಪುರುಷ ಬಾಲಕರು. ಒಲೆಯಿಂದ ಹೊರಡುತಿರುವ ಹೊಗೆಯಿಂದ ನಿಮಗೆ ಉಸಿರು ಕಟ್ಟುತಿದೆ—ಹೊರಗೆ ಹೋಗಿ ಸ್ವಚ್ಛ ಹವೆಯಲ್ಲಿ ಉಸಿರಾಡಿಸಲು ಹವಣಿಸುತ್ತೀರಿ. ಆದರೆ ಹೊರಗಾದರೂ ಸ್ವಚ್ಛ ಹವೆಯೆಲ್ಲಿ? ಕೋಣೆಯ ಗೋಡೆಯ ಆ ಬದಿಯಲ್ಲಿರುವದೇನಿದು? ಸಾರ್ವಜನಿಕ ಮೂತ್ರಾಶಯಗಳ ಒಂದು ಸಾಲು ಮತ್ತು ಅದರಾಚೆ ಸಾರ್ವಜನಿಕ ಪಾಯಖಾನೆಗಳು. ಎದೆಗುಂದಬೇಡಿರಿ; ಇಷ್ಟು ದೂರ ಬಂದಿದ್ದೀರಂತೆ, ಉಳಿದುದೆಲ್ಲವನ್ನೂ ಗಟ್ಟಿ ಮನಸುಮಾಡಿ ನೋಡಿಯೇ ಹೋಗಿರಿ. ಇಲ್ಲಿದೆ ಆ ಕೊಳಚೆ ಹೊಂಡ. ಅದರಲ್ಲಿ ಎಲ್ಲ ಹೊಲಸು ಬಕೀಟುಗಳನ್ನೂ ತೊಳೆಯಲಾಗುತ್ತದೆ. ಆದರೆ ನೀರನೊಂದು ಗುಟುಕು ಕುಡಿದು ನೋಡುವಿರಾ? ಅವರು ನಿಮಗೆ ಕೊಡಬಹುದಾದ್ದರಲ್ಲಿಲ್ಲ ಇದು ಅತಿ ಶುದ್ಧವಾದುದು. ಇಲ್ಲಿ ಗಂಡಸರು, ಹೆಂಗಸರು, ಮಕ್ಕಳು ಕುಡಿಯಬೇಕು, ಮೀಯಬೇಕು, ತೊಳೆಯಬೇಕು. ಇದೆಲ್ಲ ತುಸು ವಿಚಿತ್ರವೆಂದು ತೋರುತಿರಬಹುದು ನಿಮಗೆ, ಅಲ್ಲವೆ? ನೀವು ಜಾರಿಕೊಳ್ಳಲು ಬಯಸುತಿರಬಹುದು. ಒಳ್ಳೇದು, ಆದರೆ ಆ ಹೊಂಡದಾಚೆಗಿನ ಒಂದು ಕೋಣೆಯನ್ನಂತೂ ನೋಡಿ ಹೋಗಿರಿ. ಎಚ್ಚರಿಕೆಯಿಂದ ಕಾಲಿಡಿರಿ. ನೆಲ ಬಹಳ ತಗ್ಗಾಗಿದೆ, ಹೊಂಡದ ಕೊಳೆನೀರೊಸರಿ ಬಹಳ ತೇವವೂ ಆಗಿದೆ. ಇದಕ್ಕೇನೋ ಒಂದು ಕಿಟಕಿಯುಂಟು. ಆದರೆ ಅದರ ಹತ್ತರ ಹೋದಗೀದೀರಿ. ಗೋಡೆ ಬಿರುಕು ಬಿಟ್ಟಿದೆ. ಸದ್ಯದಲ್ಲೇ ಅದೀ ಗುಡ್ಡದಿಂದ ಕೆಳಗುರುಳಲಿರುವಂತೆ ತೋರುವದು.

ಸಾಕು. ಇನ್ನು ಬೇಕಾದರೆ ನೀವು ನಿಮ್ಮ ರಮಣೀಯ ಉದ್ಯಾನದಲ್ಲಿರುವ ನಿರ್ಮಲವಾಸಗೃಹಕ್ಕೆ ಮರಳಿರಿ. ಆದರೆ ಈ ಶ್ರೀಮದ್ಗಂಭೀರ ಮಸೂರಿಯ ಜಾಜ್ವಲ್ಯಮಾನ ಶಿಖರಗಳಲ್ಲಿರುವ ಈ ಕರಿಗಪ್ಪು ಕಲೆಯನ್ನು ತೊಡೆದು ಹಾಕಿದಲ್ಲದೆ ಈ ಸಂದರ್ಶನದ ನೆನಹು ನಿಮ್ಮ ಹೃದಯಕ್ಕೆ ಶಾಂತಿಯನ್ನು ಕೊಡದಿರಲಿ!

ಕಿಸಾನ ಆಶ್ರಮ — ಮೀರಾ ಬೆನ್

೨೮ ಅಕ್ಟೋಬರ ೪೬

## ವಾಲ್ಮೀಕಿಯ ವಿಜಯ

ಬಂಗಾಲದ ಮಹಾಮಹೋಪಾಧ್ಯಾಯ ಹರಿಹರ ಶಾಸ್ತ್ರಿಗಳು ಸುಮಾರು ೫೦ ವರ್ಷಗಳ ಹಿಂದೆ ‘ವಾಲ್ಮೀಕಿಯ ಜಯ’ ವೆಂಬ ಸುಂದರ ಕಾದಂಬರಿಯನ್ನು ಪ್ರಸಿದ್ಧಿಸಿದರು. ಇದು ಮರಾಠಿ, ಗುಜರಾತಿ, ಮತ್ತು ಅನೇಕ ಪ್ರಾಂತಿಕ ಭಾಷೆಗಳಲ್ಲಿ ಭಾಷಾಂತರಿಸಲ್ಪಟ್ಟಿದೆ. ಇಂದಿಗೂ ಈ ಗ್ರಂಥವನ್ನು ಒಳ್ಳೇ ಆನಂದದಿಂದ ಜನರು ಓದುತ್ತಿರುವರು. ಈ ಕಾದಂಬರಿಯನ್ನು ವಸಿಷ್ಠ ಮತ್ತು ವಿಶ್ವಾಮಿತ್ರ, ಒಬ್ಬನು ಬ್ರಾಹ್ಮಣ ವರ್ಗದ ಮುಖಂಡನು, ಇನ್ನೊಬ್ಬನು ಕ್ಷತ್ರಿಯ ವರ್ಗದ ಮುಖಂಡನು—ಇವರ ದ್ವೇಷಾಸೂಯೆಗಳ ಕತೆಯ ಅಧಾರದಿಂದ ಬರೆಯಲಾಗಿದೆ. ಆ ಕಾಲದಲ್ಲಿ ಹಿಂದುಸ್ತಾನದಲ್ಲಿ ಆರ್ಯರು ವಾಸಿಸುವ ಭಾಗದ ಮೇಲೆ ರಾಜಕೀಯ ಸಾಮಾಜಿಕ ಪ್ರಭುತ್ವ ಪ್ರಸ್ಥಾಪನೆಗಾಗಿ ನಡೆದ ಹೋರಾಟದ ಚಿತ್ರವೇ ಈ ಕಾದಂಬರಿಯ ವಸ್ತುವು. ಭೂಮಿಯನ್ನು ‘ಕಾಮಧೇನು’ ಎಂಬ ರೂಪಕದಿಂದ ಕರೆಯಲಾಗಿದೆ. ಈ ಎರಡೂ ಪಕ್ಷದವರಲ್ಲಿ ಘೋರವಾದ ಯುದ್ಧಗಳು ಎಷ್ಟೋ ತಲೆಮಾರುಗಳ ವರೆಗೆ ನಡೆದಿದ್ದವು. ಮೊದಲು ವಿಶ್ವಾಮಿತ್ರನು ವಸಿಷ್ಠನ ಮೇಲೆ ದಾಳಿಮಾಡಿ ಅವನನ್ನು ಓಡಿಸಿ, ಅವನ ನೂರು ಮಕ್ಕಳನ್ನು ಕೊಂದು ಅವನ ‘ಕಾಮಧೇನು’ ವನ್ನು ಗೆದ್ದನು. ನಂತರ ವಸಿಷ್ಠನು ತನ್ನ ಬೆಂಬಲಿಗರನ್ನು ಕಲೆಹಾಕಿ ವಿಶ್ವಾಮಿತ್ರನನ್ನು ಸಂಪೂರ್ಣವಾಗಿ ಸೋಲಿಸಿ ಅವನನ್ನು ಹಿಮಾಲಯದ ಕಡೆಗೆ ಓಡಿಸಿದನು. ಅಲ್ಲಿ ಅವನು ಎಷ್ಟೋ ಸಾವಿರ ವರ್ಷ, ಬಹಳ ಮಾಡಿ ಎಷ್ಟೋ ತಲೆಮಾರುಗಳ ವರೆಗೆ ಸದ್ದಿಲ್ಲದೆ ಕುಳಿತುಕೊಳ್ಳುವಂತಾಯಿತು. ಆದರೆ ಉಳಿದ ಕ್ಷತ್ರಿಯರು ಕೂಟಯುದ್ಧವನ್ನು ಹಾಗೇ ಮುಂದರಿಸಿ ಅಲ್ಲಲ್ಲಿ ಒಂದೊಂದೇ ಇರುವ ಬ್ರಾಹ್ಮಣ ವಸಾಹತುಗಳ ಮೇಲೆ ದಾಳಿಮಾಡಿ ಆಶ್ರಮವಾಸಿಗಳನ್ನು ಕೊಂದು, ಅವರ ಆಶ್ರಮಗಳನ್ನು ವಿಧ್ವಂಸ ಮಾಡುವ ಕಾಯಕ ನಡೆಸಿದ್ದರು. ಈ ರೀತಿಯ ದಾಳಿಯಲ್ಲಿ ವೀರನಾದ ತರುಣ ಪರಶುರಾಮನ — ಅಂದರೆ ಕೊಡಲಿಯನ್ನು ಹಿಡಿದ ರಾಮನ —ಕುಟುಂಬವು ಪಾಳಾಗಿಹೋಯಿತು. ತನ್ನ ತಂದೆ ಹಾಗೂ ಅಣ್ಣತಮ್ಮಂದಿರ ಕೊಲೆಮಾಡಿದ್ದು ನೋಡಿ ಪರಶುರಾಮನಿಗೆ ಮಿತಿಮೀರಿ ಸಿಟ್ಟು ಬಂದು ಅವನು ಈ ರೀತಿ ಹಲ್ಲೆ ಮಾಡುತ್ತಿರುವ ಕ್ಷತ್ರಿಯರ ವಂಶವನ್ನೇ ನಿರ್ಮೂಲ ಮಾಡುವ ಪ್ರತಿಜ್ಞೆಮಾಡಿ ೨೧ ಸಾರೆ ಕ್ಷತ್ರಿಯರನ್ನು ಸೋಲಿಸಿ, ನಿರ್ದಯೆಯಿಂದ ಅವರಲ್ಲಿ ಸಿಕ್ಕವರನ್ನು ಕೊಂದು ಹಾಕಿದನು. ಇವನ ಪರಾಕ್ರಮದ ಮುಂದೆ ಕ್ಷತ್ರಿಯರು ನಿಲ್ಲದಾದರು. ಜಗತ್ತಿನಲ್ಲಿ ಕ್ಷತ್ರಿಯರ ವಂಶವೇ ಉಳಿಯದಂತೆ ಆಗುವದೇನೋ ಎಂದು ಅನಿಸಹತ್ತಿತು. ವಸಿಷ್ಠರಿಗೂ ಅವನ ಅನುಯಾಯಿಗಳಿಗೂ ಈ ರೀತಿಯ ಪರಿಣಾಮವಾದೀತೆಂದು ಮೊದಲು ಅನಿಸಿರಲಿಲ್ಲ. ಆದರೆ ಪರಿಸ್ಥಿತಿ ಕೈಮೀರಿ ಹೋಗಿತ್ತು. ಪರಶುರಾಮನ ಸೇಡು ತೀರಿಸಿಕೊಳ್ಳುವ ಬುದ್ಧಿಯಿಂದ ಹೊರಟ ರಕ್ತಪಿಪಾಸೆಯ ಯೋಜನೆಗಳನ್ನು ತಡೆಯುವದು ಶಕ್ಯವಿಲ್ಲವೆಂದು ಅನಿಸಹತ್ತಿತು. ಪರಶುರಾಮನ ಕತ್ತಲೆಯಿಂದ ಪರಿಸ್ಥಿತಿಯು ಭೀಷಣವಾಗಿತ್ತು.

ಆದರೆ ಸಾತ್ವಿಕ ಜೀವಿಯಾದ ವಾಲ್ಮೀಕಿಯು ಇಂಥ ಪರಿಸ್ಥಿತಿಯಲ್ಲಿ ಅನಿರೀಕ್ಷಿತವಾಗಿ ಮುಂದೆ ಬಂದನು. ವಾಲ್ಮೀಕಿಯು ತೀರ ಬಡತನ ಸ್ಥಿತಿಯಲ್ಲಿರುವ ಒಂದು ಬ್ರಾಹ್ಮಣ ಮನೆತನದಲ್ಲಿ ಜನಿಸಿದವನಾಗಿದ್ದರೂ, ಕವಿತಾ ಹಾಗೂ ಸಂಗೀತ ಈ ಶಕ್ತಿಗಳು ಅವನಲ್ಲಿ ಸ್ವಭಾವಿಕವಾಗಿಯೇ ಇದ್ದವು. ಇಷ್ಟೇ ಅಲ್ಲ. ಅವನು ತಾನು ಕೈಕೊಂಡ ಕಾರ್ಯದಲ್ಲಿ ಒಳ್ಳೆ ಶ್ರದ್ಧೆಯುಳ್ಳವನೂ ಆಗಿದ್ದನು. ಅವನಿಗೆ ಈ ಬ್ರಾಹ್ಮಣ ಕ್ಷತ್ರಿಯ ಯುದ್ಧವನ್ನು ನೋಡಿ ಸಹಿಸುವದಾಗಲಿಲ್ಲ. ಯುದ್ಧವು ನಿಂತು ಬ್ರಾಹ್ಮಣ ಕ್ಷತ್ರಿಯ ವರ್ಗಗಳಲ್ಲಿ ಸೌಹಾರ್ದವುಂಟಾಗುವ ವರೆಗೆ ನಾನು ವಿಶ್ರಮಿಸಲಿಕ್ಕಿಲ್ಲವೆಂದು ಪ್ರತಿಜ್ಞೆಮಾಡಿ ಅವನು ಕಾರ್ಯಪ್ರವೃತ್ತನಾದನು. ಅವನ ಬಳಿಯಲ್ಲಿ

—ಕನೇ ಪುಟಕ್ಕೆ

# ಶ್ರದ್ಧೆಯ ಪುನರುದ್ಧಾರ

"ಹರಿಜನ" ಓದುಗರು ದೈನಿಕ ಪತ್ರಗಳಿಂದ ಪೂರ್ವ ಬಂಗಾಲದಲ್ಲಿ ಗಾಂಧೀಜಿಯ ಚಟುವಟಿಕೆಗಳನ್ನೂ ಚಲನವಲನಗಳನ್ನೂ ಅರಿತುಕೊಳ್ಳುತ್ತಾರೆಂದು ಭಾವಿಸುತ್ತೇನೆ. ಅಲ್ಲಿ ಅವರು ಕೈಕೊಂಡ ಧ್ಯೇಯವೆಂದರೆ ರಾಷ್ಟ್ರದಲ್ಲಿ ಕಳೆದ-ಹೋದ ಶ್ರದ್ಧೆಯನ್ನು ಪುನರುದ್ಧರಿಸುವದೆಂದು ನನ್ನ ಭಾವನೆ.

ಧಾರ್ಮಿಕವೆಂದು ಹೇಳಿಸಿಕೊಳ್ಳುವ ಸಂಪ್ರದಾಯಗಳಿಗೆ ಗಟ್ಟಿಯಾಗಿ ಅಂಟಿಕೊಳ್ಳುವ ಬಗೆ-ಅವು ಸತ್ಸಂಪ್ರದಾಯಗಳಿರಲಿ ದುಷ್ಟವಾಗಿರಲಿ ಮಹತ್ವರಹಿತವಾದವುಗಳಿರಲಿ-ಎಲ್ಲ ಸಮಾಜಗಳಲ್ಲಿಯೂ ಬೇಕಾದಷ್ಟು ಇದೆ. ಕಂಕಣಹಾನಿ, ಕುಂಕುಮ ನಾಶ, ಚಂಡಿಕೆ ಅಥವಾ ಗಡ್ಡದ ಅಪಹಾರ ಇವುಗಳಿಂದ ನಿಜವಾಗಿ ಎಂದಿಗೂ ಸಮಾಧಾನಗೊಳ್ಳದ ವ್ಯಾಕುಲತೆಯುಂಟಾಗುತ್ತದೆ. ಆದರೂ ಸಚೇತನ ಶ್ರದ್ಧೆಯೆಂಬುದು ಜನರಲ್ಲಿ ನಾಮಶೇಷವಾಗಿದೆ. ಅನುಯಾಯಿಯಾದವನಲ್ಲಿ ಏಕಾಕಿಯಾಗಿ ಧರ್ಮರಕ್ಷಣೆಗೆ ನಿಲ್ಲುವ, ಅದಕ್ಕಾಗಿ ಜೀವನವನ್ನು ಮುಡುಪಿಡುವ ಮತ್ತು ಅವಶ್ಯ ಬಿದ್ದರೆ ಅದಕ್ಕಾಗಿ ಪ್ರಾಣವನ್ನು ಬಲಿಕೊಡುವ ಶಕ್ತಿಯನ್ನು ಹುಟ್ಟಿಸಲಾರದಂಥ ಶ್ರದ್ಧೆ ಎಂಥ ಶ್ರದ್ಧೆ! ವಿಲಕ್ಷಣವಾದ ಆತ್ಮಗೌರವವನ್ನು ಉಂಟುಮಾಡುವದೇ ಶ್ರದ್ಧೆಯ ಗುಣ. ಅದನ್ನು ಮೀರಿಯ ಬಯಸುವ ಉದ್ಧತ ನ್ಯಾಯಬಾಹಿರನ ಬಲಾತ್ಕಾರವನ್ನು ಪ್ರಾಣವನ್ನಾದರೂ ಪಣಕ್ಕಿಟ್ಟು ಎದುರಿಸುವ ಅಜೇಯ ಇಚ್ಛಾಶಕ್ತಿಯನ್ನು ಉಂಟುಮಾಡುವದೇ ಶ್ರದ್ಧೆ. ಅನುಯಾಯಿಗಳಲ್ಲಿ ಅಂಥ ಧೈರ್ಯವನ್ನು ಹುಟ್ಟಿಸದ ಶ್ರದ್ಧೆ ಬರಿ ಹೆಸರಿನ ಪೂರ್ತಿ ಶ್ರದ್ಧೆಯನ್ನ ಬೇಕು. ಅದು ತನ್ನ ಸತ್ವವನ್ನು ಕಳೆದುಕೊಂಡಾಗ ನಂಬಿಕೆ, ಸಂಪ್ರದಾಯ, ರೂಢಿಗಳ ಒಂದು ಮೂಟೆಯೆನಿಸಿ ಪರಿಸ್ಥಿತಿ ಪ್ರತಿಕೂಲವಾಗಿರದಿದ್ದ ಸಮಯದಲ್ಲಿ ಮಾತ್ರ ಅನುಸರಿಸರಿಸಬೇಕಾದ ಧರ್ಮವಾಗಿ ಬಿಡುವದು. ಆ ರೂಢಿ ಸಂಪ್ರದಾಯಗಳಲ್ಲಿ ಸ್ವತಃ ಯಾವ ಹುರುಳೂ ಇಲ್ಲದಿರಬಹುದು; ಮಾನಸಿಕ ಆಲಸ್ಯವೊಂದಲ್ಲದಿದ್ದರೆ ಅವುಗಳಲ್ಲೆಷ್ಟೋ ಇಷ್ಟರಲ್ಲೇ ಬಿಸುಡಲ್ಪಡುತಿದ್ದವೇನೊ. ನಿಜವಾಗಿಯೂ ಅನೇಕ ಆಧುನಿಕ ಸ್ತ್ರೀ ಪುರುಷರು ಕೈಬಳೆಗನ್ನೂ ಹಣೆಯ ಕುಂಕುಮವನ್ನೂ ಮುಖದ ಮೇಲಿನ ಮತಚಿಹ್ನವನ್ನೂ ಚಂಡಿಕೆಯನ್ನೂ ಗಡ್ಡವನ್ನೂ ತೊಡೆದೊಗೆದು ಬಹಳ ದಿನಗಳಾಗಿವೆ. ಈ ರೂಢಿ ಸಂಪ್ರದಾಯಗಳನ್ನು ಮೊದಲು ನಿರ್ಮಿಸಿದ್ದು ಯಾವುದೋ ಒಂದು ಪ್ರಬಲಶ್ರದ್ಧೆಯೇ ಆಗಿರಬೇಕು; ಆಗ ಅವು ಧ್ಯೇಯಬದ್ಧ ಆಂತರಿಕ ಜೀವನದ ಬಾಹ್ಯ ಚಿಹ್ನಗಳಾಗಿದವು. ಆದರೆ ಒಳಗಿನ ಆ ಮೂಲ ಸತ್ವವನ್ನು ಒಂದು ಜನಾಂಗ ಕಳೆದುಕೊಂಡಿದ್ದರೆ, ಬಾಹ್ಯ ಚಿಹ್ನಗಳನ್ನು ಉಳಿಸಿಕೊಂಡ ಅಥವಾ ಅವುಗಳನ್ನು ಪುನಃ ಪ್ರಸ್ಥಾಪಿಸಿದಾ ಕ್ಷಣಕ್ಕೆ ಶ್ರದ್ಧೆಯೆಂಬ ಆ ಆಧ್ಯಾತ್ಮಿಕ ಚೈತನ್ಯಜ್ವಾಲೆ ಪುನಃ ಉರಿದೇಳುವದಸಾಧ್ಯ.

ಈ ಕಳೆದು ಹೋದ ಶ್ರದ್ಧೆಯ ಪುನರುತ್ಥಾನವೇ ಎಲ್ಲ ದಲಿತ ಜನಗಳ, ಮುಖ್ಯವಾಗಿ ನಮ್ಮ ಸ್ತ್ರೀಜನದ ಪ್ರಮುಖ ಸಮಸ್ಯೆ ಕೊಳ್ಳೆ, ಸುಲಿಗೆ, ಅಪಹಾರ, ಸ್ತ್ರೀ ಮಾನಾಪಹಾರ, ಬಲುಮೆಯ ಧರ್ಮಾಂತರ ಮೊದಲಾದ ಸಂಗತಿಗಳು ಜಗತ್ತಿನ ಇತಿಹಾಸದಲ್ಲಿ ಹೊಸಘಟನೆಗಳೇನೂ ಅಲ್ಲ ಹಿಂದುಸ್ತಾನದಲ್ಲಿಯೂ ಇವು ಪದೇ ಪದೇ ಜರಗಿವೆ. ಜಾಲಿಯಾನವಾಲಾ ಬಾಗ ಹತ್ಯಾಕಾಂಡದ ಕಾಲಕ್ಕೆ ಪಂಜಾಬದಲ್ಲಿ ಸೈನಿಕರೂ ಪೋಲೀಸರೂ ನಡೆಸಿದ ಅತ್ಯಾಚಾರಗಳು, ಕನ್ಯಾಪಹಾರ ಧರ್ಮಾಂತರಗಳನ್ನು ಬಿಟ್ಟರೆ, ಇತರ ವಿಚಾರಗಳಲ್ಲಿ, ಪೂರ್ವಬಂಗಾಲದ ಘಟನೆಗಳಿಗಿಂತಲೂ ಹೆಚ್ಚಲ್ಲದಿದ್ದರೂ ಅಷ್ಟೇ ಭಯಾನಕವಾಗಿದ್ದವು. ಅದಕ್ಕೆ ಗುರಿಯಾದವರು ಸೌಮ್ಯ ಬಂಗಾಲಿ ಹಿಂದುಗಳಲ್ಲ ಶೂರ ಪಂಜಾಬಿ ಹಿಂದೂ, ಮುಸ್ಲಿಂ, ಸೀಖರು. ೧೯೪೭-೪೮ ರ ದಬ್ಬಾಳಿಕೆಯಲ್ಲಿ ಸ್ತ್ರೀಯರು ಇಂಥವೇ ಅವಮಾನಗಳಿಗೆ ಚಿಮೂರದಲ್ಲಿ ಮಾತ್ರವಲ್ಲ-ಅಲ್ಲಿನ ಘಟನೆಗಳು ಶ್ರೀ ಭನಸಾಲಿಯವರ ಸ್ಮರಣೀಯ ಉಪವಾಸದಿಂದಾಗಿ ಜಗಜ್ಜನಿತವಾದವು-ಇನ್ನೂ ಅನೇಕ ಕಡೆಗಳಲ್ಲಿ ಗುರಿಯಾಗಬೇಕಾಯಿತು. ಪ್ರತಿಯೊಂದು ಸಂದರ್ಭದಲ್ಲಿಯೂ ಪುರುಷರಲ್ಲಿ ತಮ್ಮ ಸ್ತ್ರೀಯರನ್ನು ರಕ್ಷಿಸುವ ದೈಹಿಕ ಬಲಕ್ಕಿಂತಲೂ ಆತ್ಮಬಲದ ಅಭಾವವೂ ಸ್ತ್ರೀಯರಲ್ಲಿ ಧ್ಯೇಯಬದ್ಧ ಜೀವನದಿಂದ ಹುಟ್ಟುವ ಆತ್ಮಗೌರವವೊಂದೆ ಕೊಡಬಲ್ಲ ಶ್ರದ್ಧಾಬಲದ ಅಭಾವವೂ ಕಂಡು ಬಂದಿದೆ. ಈ ಶ್ರದ್ಧಾಬಲದಿಂದ ಮಾತ್ರ ದೇಹದಲ್ಲಿ ದುರ್ಬಲರಾಗಿದ್ದವರಿಗೂ ಪ್ರತಿಭಟಿಸುವ ಇಚ್ಛಾಶಕ್ತಿ ಹುಟ್ಟಬಹುದಾಗಿದೆ. ಪುರುಷರಲ್ಲಿ ದೇಹಬಲವೂ ಇತರ ಸಾಧನಗಳೂ ಇಲ್ಲದಿದ್ದ ಪಕ್ಷದಲ್ಲಿ ಸ್ತ್ರೀಯರು ಶಾರೀರಿಕ ಶಕ್ತಿಯ ಪ್ರದರ್ಶದಿಂದ ಆತ್ಮರಕ್ಷಣೆ ಮಾಡಿಕೊಳ್ಳಬಹುದೆಂದು ನಿರೀಕ್ಷಿಸುವದು ಸಾಧ್ಯವಿಲ್ಲ. ತಮ್ಮ ಹೆಂಗಳೆಯರನ್ನೂ ದುರ್ಬಲರನ್ನೂ ರಕ್ಷಿಸುವ ಪ್ರಯತ್ನದಲ್ಲಿ ಎಲ್ಲರೂ ನಷ್ಟರಾಗಿ ಹೋಗುವವರೆಗೂ ಕಾದಾಡುವ ನೈತಿಕ ಸಾಹಸ ಗಂಡಸರಲ್ಲಿಲ್ಲದೆ ಅವರೇ ಬದುಕಿದರೆ ಬೇಡ ತಿಂದೇನೆಂದು ಓಡಿ ಹೋದರೆ ಅಂಥ ಸ್ತ್ರೀಯರನ್ನು ದೇವರೇ ಕಾಪಾಡಬೇಕು. ಇಲ್ಲಿ ನಾನು "ದೇವರೇ ಕಾಪಾಡಬೇಕು" ಎಂಬ ಶಬ್ದಗಳನ್ನು "ಯಾರೂ ಕಾಪಾಡಲಾರರೆಂಬ" ವ್ಯಂಗ್ಯ ಅರ್ಥದಲ್ಲಿ ಉಪಯೋಗಿಸಿಲ್ಲ. ಹುತಾತ್ಮರನ್ನು ನಿರ್ಮಿಸುವ ಆ ಅಂತರಿಕ ಆತ್ಮಬಲದ ಸಂಕೇತವಾಗಿ ಅವುಗಳನ್ನು ಉಪಯೋಗಿಸಿದ್ದೇನೆ.

ಗಾಂಧೀಜಿಯ ಇಡಿ ಜೀವಮಾನವೇ ಹಿಂದುಸ್ತಾನದಲ್ಲಿ ಈ ಶ್ರದ್ಧೆಯ ಪುನರುತ್ಥಾನ ಮಾಡಿಸಲು ಮುಡುಪಾಗಿದೆ. ಸ್ವತಃ ಗಾಂಧೀಜಿಗೆ, ರಾಜಕೋಟೆಯ ರಾಜಕೀಯ ಏಜಂಟನಿಂದ ದೊರೆತ ಮೊದಲನೆ ಅವಮಾನದಿಂದ, ಈ ಶ್ರದ್ಧಾಹೀನತೆಯ ಅನುಭವವಾಯಿತು. ಆಗ ಇನ್ನೂ ಅವರಿಗೆ ೨೫ ವರ್ಷಗಳಾಗಿದ್ದಿಲ್ಲ. ಆ ಅಪಮಾನವಾದರೂ ಚಿಲ್ಲರೆ ಸಂಗತಿಯಾಗಿತ್ತು. ಅಷ್ಟು ಶಿಷ್ಟತೆಯನ್ನರಿಯದ ಅಧಿಕಾರಿಯ ವೈಯಕ್ತಿಕ ಅವಿನಯವೆಂದು ಅದನ್ನು ಕಡೆಗಣಿಸಬಹುದಾಗಿತ್ತು. ವಸ್ತುತಃ, ಮುಂಬಯಿ ಕೇಸರಿಯೆನಿಸಿದ ಸರ್ ಫಿರೋಜಶಹಾ ಮೆಹತಾರು ಕೂಡ, ಈ ಅವಮಾನವನ್ನು ನುಂಗಿಕೊಂಡು ಮರೆತು ಬಿಡುವದು ಲೇಸೆಂಬದಕ್ಕಿಂತ ಉತ್ತಮ ಉಪದೇಶವನ್ನು ಗಾಂಧೀಜಿಗೆ ಕೊಡಲು ಸಮರ್ಥರಾಗಲಿಲ್ಲ. ಗಾಂಧೀಜಿ ಅದನ್ನು ನುಂಗಲೂ ನುಂಗಿಕೊಂಡರು. ಬೇರೇನು ಮಾಡುವದೂ ಆಗ ಅವರಿಗೆ ಸಾಧ್ಯವಿದ್ದಿಲ್ಲ. ಮುಂದೆ ಅದಕ್ಕಿಂತಲೂ ದೊಡ್ಡ ಅವಮಾನಗಳನ್ನು ಸಹಿಸಲು ಕೂಡ ಅವರು ಕಲಿತರು. ಆದರೆ ಅದನ್ನು ಮರೆಯುವದು ಮಾತ್ರ ಅವರಿಗೆ ಸಾಧ್ಯವಾಗಲಿಲ್ಲ. ಅಂದಿನಿಂದಲೇ ಈ ರೋಗಕ್ಕೆ ಪಾತ್ರಿಯಾದ ಔಷಧವನ್ನು ಕಂಡುಹಿಡಿಯಲು ಅವರು ಯತ್ನಿಸತೊಡಗಿದರು. ದಕ್ಷಿಣ ಆಫ್ರಿಕೆಯ ಸಾರ್ವಜನಿಕ ವಾಹನವೊಂದರಲ್ಲಿ ಬಿಳಿ ಕಂಡಕ್ಟರನು ಅವರನ್ನು ಚೆನ್ನಾಗಿ ಗುದ್ದಿದಾಗ ಅವರಿಗೆ ಆ ಔಷಧ ಸಿಕ್ಕಿತು. ಕಲ್ಲಿನಿಂದ ತೆಂಗಿನಕಾಯಿಯ ಮೇಲೆ ಬಡಿದರೆ ಒಳಗಿನ ಮಧುರವಾದ ತಿರುಳು ಹೊರಬರುವಂತೆ ಆ ಬಿಳಿ ಕಂಡಕ್ಟರನ ಗುದ್ದುಗಳು ಬೀಳುತ್ತ ಬೀಳುತ್ತ ಹೊರಗಿನ ಚಿಪ್ಪು ಒಡೆದು ಒಳಗೆ ಅಡಗಿದ್ದ ಜ್ವಾಲೆ ಗೋಚರವಾಯಿತು. ಒಬ್ಬನು ಇನ್ನೊಬ್ಬನನ್ನು ಸಾಯ ಹೊಡೆಯಬಹುದು, ಇಲ್ಲವೆ ನೂರಾರು ಬಗೆಯ ಚಿತ್ರಹಿಂಸೆಗೊಳಗುಮಾಡಬಹುದು; ಆದರೆ ಅವನ ಇಚ್ಛೆಗೆ ವಿರುದ್ಧವಾಗಿ ಅವನನ್ನು ಬಗ್ಗಿಸುವದು ಸಾಧ್ಯವಿಲ್ಲವೆಂಬದನ್ನು ಅವರು ಕಂಡುಕೊಂಡರು. ಮೃತ್ಯು ಹಿಂಸೆಗಳ ಭಯ, ಅಸ್ತಿ ಕಳೆದುಕೊಳ್ಳುವ, ಸಾಮಾಜಿಕ ಬಹಿಷ್ಕಾರದ ಅಥವಾ ಸುಖಜೀವನಕ್ಕೆರವಾಗುವ ಭೀತಿ ಇವುಗಳಿಂದಲೇ ಮನುಷ್ಯನು ಸ್ವಾತಂತ್ರ್ಯವನ್ನು ಬಿಟ್ಟುಕೊಡಲು ಸಿದ್ಧನಾಗುತ್ತಾನೆ. ತನ್ನ ತತ್ವಗಳನ್ನೂ ಆತ್ಮಗೌರವವನ್ನೂ ಬಲಿಗೊಡಲು ಒಪ್ಪುತ್ತಾನೆ. ಆ ಹೆದರಿಕೆಯನ್ನೊಮ್ಮೆ ಅವನು ಒಗೆದನೆಂದರೆ ಮತ್ತೆ ಏಕಾಕಿಯಾದರೂ ಒಂದು ಸೈನ್ಯದಷ್ಟು ಬಲ ಅವನಿಗೆ ಬರುವದು. ಬದಲಾಗಿ, ಅದಿಲ್ಲದಿದ್ದರೆ ಸುಶಿಕ್ಷಿತ ಸೈನಿಕರಾದರೂ ಎಲ್ಲ ಬಗೆಯ ಅವಮಾನ ಅವಹೇಲನೆಗಳನ್ನು ಸಹಿಸಿಕೊಳ್ಳಬಹುದು, ಬಂಗಾಲ ಬಿಹಾರಗಳ ಭಯವಿಹ್ವಲ ಸಂಶಯಗ್ರಸ್ತ ಜನರಂತೆ ಕಂಗೆಟ್ಟು ದಿಕ್ಪಾಲಾಗಿ ಪಲಾಯನ ಮಾಡಬಹುದು.

ಹೀಗೆ, ಈ ಶ್ರದ್ಧೆಯ ಪುನರುತ್ಥಾನ ಮಾಡಿದ ಗಾಂಧೀಜಿ ಅದನ್ನು ದಕ್ಷಿಣ ಆಫ್ರಿಕೆಯ ಹಿಂದೀ ಸ್ತ್ರೀಪುರುಷರಲ್ಲಿ ಆವಾಹನಗೊಳಿಸಿದರು. ಅದರಿಂದಾದ ಪರಿಣಾಮವನ್ನು ಅವರ ವಿರೋಧಿಗಳಾದ ಫೀಲ್ಡ ಮಾರ್ಶಲ್ ಸ್ಮಟ್ಸರೇ ಹೀಗೆ ಬಣ್ಣಿಸಿದ್ದಾರೆ: "ಗಾಂಧಿ ಹೊಸ ತಂತ್ರವೊಂದನ್ನು ಪ್ರಯೋಗಿಸಿದನು. ಮುಂದೆ ಅದನ್ನೇ ಅವನು ಹಿಂದುಸ್ತಾನದಲ್ಲಿ ತಾನು ಹೂಡಿದ ರಾಜಕೀಯ ಹೋರಾಟಗಳಿಂದ ಜಗತ್ಪ್ರಸಿದ್ಧವಾಗಿ ಮಾಡಿದನು ...... ಅವನ ಪಾಲಿಗೆ ಎಲ್ಲವೂ ಯೋಜನೆಯಂತೆ ಸಾಗಿತು. ಕಾಯದೆ ಸುವ್ಯವಸ್ಥೆಗಳ ರಕ್ಷಕನಾದ ನನ್ನ ಪಾಲಿಗೆ ಸರ್ವ ಸಾಮಾನ್ಯವಾದ ಪೇಚಾಟದ ಪರಿಸ್ಥಿತಿಯೂ ವಿಶೇಷ ಜನ ಬೆಂಬಲವಿಲ್ಲದ ಕಾಯದೆಯನ್ನು ಜಾರಿಗೆ ತರುವ ಕಷ್ಟಗಳೂ ಕೊನೆಗೆ ಆ ಕಾಯದೆಯನ್ನು ಹಿಂತೆಗೆದುಕೊಳ್ಳಬೇಕಾದಾಗ ತೊಂದರೆಗಳೂ ಗಂಟುಬಿದ್ದವು ಅವನ ಪಾಲಿಗೆ ಅದು ಯಶಸ್ವಿ ಕ್ರಾಂತಿಯಾಯಿತು. ಅದರಲ್ಲಿ ಮಾರ್ದವವೂ ಇಲ್ಲದಿದ್ದಿಲ್ಲ. ಏಕೆಂದರೆ ಗಾಂಧಿಯ ಪದ್ಧತಿಯಲ್ಲಿ ಯಾವಾಗಲೂ ಮಾರ್ದವದ ಪ್ರದರ್ಶನವಿಲ್ಲದೆ ಇರುವದಿಲ್ಲ. ಸೆರೆಮನೆಯಲ್ಲಿ ಅವನು ನನಗಾಗಿ ಬಹಳ ಉಪಯುಕ್ತವಾದೊಂದು ಜತೆ ಕಾಲ್ಮರಿಗಳನ್ನು ಹೊಲಿದು ಬಿಡುಗಡೆಯಾದೊಡನೆ ನನಗೆ ಅವನ್ನು ಅರ್ಪಿಸಿದನು! ಈ ಕಾಲ್ಮರಿಗಳನ್ನು ಅನೇಕ ವರ್ಷಗಳವರೆಗೆ ಬಿಸಿಲುಗಾಲದಲ್ಲಿ ನಾನು ಉಪಯೋಗಿಸಿದೇನೆ ......" (ಶ್ರೀ ಧರಣಿಯವರ The Mahatma and the world [ಮಹಾತ್ಮರೂ ಜಗತ್ತೂ] ಪುಸ್ತಕದಿಂದೆತ್ತಿದ್ದು).

"ತಂತ್ರ" ಶಬ್ದಕ್ಕೆ ಬರಿ ಸವಿನಯ ಶಾಸನ ಭಂಗ, ಅಸಹಕಾರ, ಕರನಿರಾಕರಣೆ ಮೊದಲಾದ ವಿಷಯಗಳಿಂದಿಷ್ಟೇ ನಾವು ಅರ್ಥ ಮಾಡಿದರೆ ಒಂದು ಪುಸ್ತಕವನ್ನು ಅದರೊಳಗಿರುವ ವಿಷಯಗಳ ಬದಲು ಅದರ ಹೊರ ಹೊದಿಕೆ, ಕಟ್ಟು, ಕಾಗದದ ಯೋಗ್ಯತೆ ಮೊದಲಾದವುಗಳಿಗಾಗಿ ಮೆಚ್ಚುವವರಂತೆ ಹುಂಬರಾಗುತ್ತೇವೆ. ಸ್ತ್ರೀಯ ಸೌಭಾಗ್ಯದ ಬಾಹ್ಯ ಚಿಹ್ನಗಳಾದ ಬಳೆ ಕುಂಕುಮಗಳಂತೆ ಈ ವಿಷಯಗಳೂ ಬರಿ ಬಾಹ್ಯ ಸಂಕೇತಗಳು ಮಾತ್ರ ಸವಿನಯ ಕಾಯದೆ ಭಂಗದ ತಂತ್ರವೊಂದರಿಂದಲೇ ಮುಂಬಯಿಯ ಮಹಿಳೆಯರಿಗೆ ಅಶ್ವಬಲದ ಗೊರಸಿನ ತುಳಿತದ ಮಧ್ಯದಲ್ಲಿ ಧ್ವಜವನ್ನು ಎತ್ತರಿಸಿ ಹಿಡಿಯುವ ಅಥವಾ ಬೋರಸದದ ಸ್ತ್ರೀಯರಿಗೆ ಪೋಲೀಸರ ನಿರ್ದಯ ಹೊಡೆಯೇಟುಗಳನ್ನಿತ್ತರೂ ಕೂದಲು ಹಿಡಿದೆಳೆದರೂ ಬಗ್ಗದ ಸತ್ವ ಬರುತಿದ್ದಿಲ್ಲ. ಇಂಥ ಅನೇಕ ಉದಾಹರಣೆಗಳನ್ನು ಕೊಡಬಹುದು. ಎಷ್ಟೇ ಅಲ್ಪಪ್ರಮಾಣದಲ್ಲಾಗಲಿ ಎಷ್ಟೇ ಕ್ಷಣಿಕವಾಗಿಯಾಗಲಿ, ಶ್ರದ್ಧೆಯ ಈ ನಿಜವಾದ ಪುನರುತ್ಥಾನವನ್ನು ಹಿಂದೀ ಜನತೆಯಲ್ಲಿ ಕೆಲವರಾದರೂ ಹೊಂದಿದ್ದರಿಂದಲೇ ಅವರಿಗೆ ಕ್ಲೇಶಗಳನ್ನು ಸಹಿಸಿ ಪ್ರಬಲ ಸಾಮ್ರಾಜ್ಯ ಶಕ್ತಿಯೆದುರು ಸಡ್ಡು ಹೊಡೆಯುವ ಧೈರ್ಯ ಬಂತು; ಅದೇ ರೀತಿಯಲ್ಲಿ ಅದರ ಅಭಾವವೇ ಇತರ ವೇಳೆಗಳಲ್ಲಿ ಜನರು ದೌರ್ಜನ್ಯ ಅವಮಾನಗಳಿಗೆ ಮೂಕರಂತೆ ತಲೆವಾಗಲು ಕಾರಣವಾಯಿತು.

ಹಿಂದುಸ್ತಾನದಲ್ಲಿ ಕೈಬೆರಳಲ್ಲೆಣಿಸುವಷ್ಟು ಹಿಂದುಗಳು, ಮುಸಲ್ಮಾನರು ಇಲ್ಲವೆ ಕ್ರಿಶ್ಚನ್ನರಲ್ಲಿ ಒಬ್ಬರಲ್ಲ ಒಬ್ಬರು ಬಹುಸಂಖ್ಯಾಕರಾದ ಇತರ ಜಾತಿಯವರ ನಡುವೆ ಜೀವಿಸಬರುವ ಒಂದೇ ಒಂದು ಸ್ಥಳವಾದರೂ ಸಿಗುವದು ದುರ್ಲಭ ಹೀಗೆ ಒಂದು ಹಳ್ಳಿಯಲ್ಲೋ ಓಣಿಯಲ್ಲೋ ಇರುವ ಅಲ್ಪ ಸಂಖ್ಯಾಕರಿಗೆ ತಮ್ಮ ಸ್ವಂತ ಧರ್ಮವನ್ನು ತ್ಯಜಿಸಿ ಬಹುಸಂಖ್ಯಾಕರ ಧರ್ಮವನ್ನು ಸ್ವೀಕರಿಸುವ ಇಚ್ಛೆಯಿಲ್ಲದಿದ್ದರೆ ಅವರು ಆ ಸ್ಥಳಗಳನ್ನೆ ಬಿಟ್ಟು ಹೋಗಬೇಕೆ? ಅಂತೆಯೇ ತನ್ನ ಧರ್ಮವನ್ನು ಬದಲಿಸಬಯಸುವವನು ತನ್ನ ವಾಸಸ್ಥಳವನ್ನೂ ಬದಲಿಸಲೇಬೇಕೆ? ಇದೊಂದೇ ಉಪಾಯವಿರುವನು ನಿಜವಾಗಿದ್ದಲ್ಲಿ, ಇನ್ನೊಂದು ಧರ್ಮದ ಅನುಯಾಯಿಗಳಿರುವ ಸ್ಥಳಕ್ಕೆ ಹೋಗಬಯಲು ಅಪೇಕ್ಷಿಸುವ ಮನುಷ್ಯನು ಪೋಲೀಸು ಮತ್ತು ಸೈನಿಕ ಕಾವಲಿನಲ್ಲೇ ಹೋಗಬೇಕೆಂದು ಅರ್ಥವಾಗುವದಿಲ್ಲವೆ? ಇದಕ್ಕೆ ಉತ್ತರ "ಹೌದು ಅಂಥ ಪರಿಸ್ಥಿತಿಯನ್ನೆ ಅಂಗೀಕರಿಸಬೇಕಾಗಿದೆ" ಯೆಂದಾದರೆ, ಆಗ ಮಾನವಗೌರವದ ಭಾವನೆಯುಳ್ಳವನೂ ಜೀವನದಲ್ಲಿ ಪರಸ್ಪರ ನಂಬಿಕೆ ಗೆಳೆತನಗಳ ಅವಶ್ಯಕತೆಯನ್ನು ಬಲ್ಲವನೂ ಆದ ಮನುಷ್ಯನಾರೂ ಈ ಪರಿಸ್ಥಿತಿಯನ್ನು ಎದುರಾಡದೆ ಸ್ವೀಕರಿಸಲಾರನು. ಹಸು ಎಮ್ಮೆಗಳು, ಆಡು ಕುರಿಗಳು ಕೂಡ ಒಂದೇ ಮಂದೆಯಾಗಿ ಒಂದೇ ಹುಲ್ಲುಗಾವಲಲ್ಲಿ ಮೆದ್ದು ಒಂದೇ ಹಟ್ಟಿಯಲ್ಲಿ ಶಾಂತತೆಯಿಂದ ಮಲಗುತ್ತವೆ. ಪಾರಿವಾಳ, ಗುಬ್ಬಿ ಮೊದಲಾದ ಭಿನ್ನ ಜಾತಿಯ ಪಕ್ಷಿಗಳು ಕೂಡ ನಿರ್ಭಯವಾಗಿ ಒಂದೇ ಹೊಲದಲ್ಲಿ ಸೇರುತ್ತವೆ. ಮನುಷ್ಯನು ಮೃಗ ಪಕ್ಷಿಗಳಿಗಿಂತ ಕೀಳಿಟ್ಟದ ಪರಿಸ್ಥಿತಿಯಲ್ಲಿ ಬಾಳಲು ಒಪ್ಪಬಹುದೆ? ಈ ಪರಿಸ್ಥಿತಿಯಲ್ಲಿ ಮೂಲತಃ ಏನೋ ದೋಷವಿದೆ. ಅದನ್ನು ನಿವಾರಿಸಲೇಬೇಕಾಗಿದೆ. ಬೇರೆ ಧರ್ಮದ ಅನುಯಾಯಿಗಳ ಮಧ್ಯದಲ್ಲಿ ಒಬ್ಬನೇ ಒಬ್ಬ ವಿಧರ್ಮೀಯನಿದ್ದರೂ ಅವನಿಗೆ ಶಾಂತಿಯಿಂದಲೂ ನಿರ್ಭಯವಾಗಿಯೂ ಬಾಳುವ ಹಕ್ಕುಂಟು. ಅವನಿಗೆ ಹಾಗೆ ಮಾಡಲು ಸಾಧ್ಯವಿಲ್ಲದಿದ್ದರೆ, ಅವನ ಶ್ರದ್ಧೆಯಲ್ಲೇ ಧರ್ಮದಲ್ಲೇ ಏನೋ ದೋಷವಿದೆ. ಇನ್ನೊಂದು ಧರ್ಮದ ಅನುಯಾಯಿಗಳು ಹಾಗೆ ಮಾಡಗೊಡದಿದ್ದರೆ ಅವನ ಶ್ರದ್ಧೆಯಲ್ಲಿ ಮಾತ್ರವಲ್ಲ ಅವರದರಲ್ಲಿಯೂ ಏನೋ ದೋಷವಿರಬೇಕು. ಹೇಗೇ ಇದ್ದರೂ ಆಗ ಅವನು ತನ್ನ ಶ್ರದ್ಧೆಯ ಪುನರುತ್ಥಾನ ಮಾಡಬೇಕು. — ತನ್ನ ಹಿತಕ್ಕಾಗಿ ಮಾತ್ರವಲ್ಲ, ಉಳಿದವರಿಗಾಗಿಯೂ.

ಇದೀಗ ಗಾಂಧೀಜಿಯ ಸದ್ಯದ ಅನುಸಂಧಾನವೆಂದು ನನ್ನೆಣಿಕೆ. ತನಗೆ ಸಾವು ಬಂದಿಲ್ಲವೆಂಬ ಒಂದೇ ಕಾರಣಕ್ಕಾಗಿ ಬದುಕಿ ಪ್ರಜಾವೃದ್ಧಿ ಮಾಡುತಿದ್ದೇವೆಂಬ, ನಂಬಲರ್ಹವಲ್ಲದ ಹೊರಗಿನ ರಕ್ಷಣೆಯಿಲ್ಲದೆ ತಾನು ಬಾಳಲಾರೆನೆಂಬ ದುರ್ಭಾವನೆಯಿಂದ ಕೆಳಗೆ ಮೆಟ್ಟಲ್ಪಟ್ಟ ಜನತೆಯನ್ನು ಅದೂ ಸ್ತ್ರೀಯರನ್ನು ಶಾಪಗಾಣಿಸಬೇಕಾಗಿದೆ. ಅವರಿಗೆ ಅಂತರಂಗದ ಅದಮ್ಯವಾದ ಶಕ್ತಿಯ ಅರಿವು ಮಾಡಿಕೊಡಬೇಕು. ಆ ಅರಿವು ಬಂದಾಗ ಅವರ ಹೃದಯದಲ್ಲಿ, ತಮ್ಮ ಭಾವನೆಗೆ ಯಾವುದು ಪವಿತ್ರವೆನಿಸುವದೋ ಯಾವುದನ್ನು ತಾವು ಪರಮಾತ್ಮ ಸದೃಶ, ಸ್ವಶರೀರ ಸದೃಶ, ಆತ್ಮಗೌರವ ಸದೃಶವೆಂದು ಬಗೆದಿರುವರೋ ಅದರ ರಕ್ಷಣೆಗಾಗಿ ಜೀವನವನ್ನೇ ಗಂಡಾಂತರಕ್ಕೆ ಗುರಿಮಾಡುವ ಕೆಚ್ಚು ಉತ್ಪನ್ನವಾಗುವದು. "ತನ್ನ ಪ್ರಾಣವನ್ನು ಬೇಕಾದಾಗ ಬಲಿಗೊಡಲು ಸಿದ್ಧನಾದ ಸ್ಥಿರಬುದ್ಧಿಯ ಮನುಷ್ಯನು ಜಗತ್ತನ್ನೇ ಬುಡಮೇಲು ಮಾಡಬಲ್ಲನು," ಎಂದು ರೂಮೆ ರೋಲಾರು ಹೇಳುತ್ತಾರೆ.

ನನ್ನ ಕಾಲೇಜು ದಿನಗಳಲ್ಲಿ ನಾನು ಎಷ್ಟೋ ವೇಳೆ ಕೇಳುತಿದ್ದ ಕೀರ್ತನೆಯ ಪಲ್ಲವಿಯೊಂದು ನನ್ನ ಮನಸಿನಲ್ಲಿ ನಿಚ್ಚಳವಾಗಿ ಮೂಡಿದೆ.

ಇರಬೇಕು ನ್ಯಾಯ ನಿಷ್ಠತೆಯ ಕಡು ಧೈರ್ಯ,
ಏಕಾಕಿಯಾದರೂ ವಿಚಲಿಸದ ಧೈರ್ಯ
ಧ್ಯೇಯದಲಿ ಮನವನ್ನು ನೆಡುವೊಂದು ಧೈರ್ಯ
ಅದನು ಜಗದಲಿ ಬಿಚ್ಚಿ ಸಾರುವಾ ಧೈರ್ಯ.

ವಾಪಿ, ಕಿ. ಘ. ಮಶ್ರುವಾಲಾ
೧೬—೧೨—೪೬

## ಸುಹ್ರವರ್ದಿಯವರಿಗೆ ಮಹಾತ್ಮರ ಮಹತ್ವದ ಪತ್ರ

### ಸಹಕಾರದ ವಿಷಯದಲ್ಲಿ ಸ್ಪಷ್ಟೀಕರಣ ಕೇಳಿದರು

ಮಹಾತ್ಮಾ ಗಾಂಧಿಯವರು ಬಂಗಾಲದ ಮುಖ್ಯ ಪ್ರಧಾನರಾದ ಸುಹ್ರವರ್ದಿಯವರಿಗೆ ಮಹತ್ವದ ಒಂದು ಪತ್ರ ಬರೆದು ನವಖಾಲಿ ಜಿಲ್ಲೆಯಲ್ಲಿಯ ಪರಿಹಾರ ಹಾಗು ಪುನರ್ನಿಯೋಜನ ಕಾರ್ಯ ಕುರಿತು ಕೆಲವು ಮುದ್ದೆಗಳ ಸಂಬಂಧದಲ್ಲಿ ಸ್ಪಷ್ಟೀಕರಣ ವಿಚಾರಿಸಿರುವರೆಂದು ಹಿಂದುಸ್ತಾನ ಸ್ಟಾಂಡರ್ಡ ಪತ್ರಿಕೆಯ ಶ್ರೀರಾಮಪೂರ ಸುದ್ದಿಗಾರನಿಂದ ತಿಳಿದು ಬರುವದು. ತಾವು ಈಗ ಶಾಂತತೆ ಸ್ಥಾಪಿಸಲು ನಡೆಸಿದ ಪ್ರಯತ್ನಗಳಲ್ಲಿ ಬಂಗಾಲ ಸರಕಾರವು ಎಷ್ಟರಮಟ್ಟಿಗೆ ಸಹಕರಿಸುವದು ಸಾಧ್ಯವಿದೆಯೆಂದು ಸ್ಪಷ್ಟ ತಿಳಿಸಬೇಕಾಗಿ ಮಹಾತ್ಮರು ಈ ಪತ್ರದಲ್ಲಿ ಕೇಳಿರುವರೆಂದೂ ಈ ಸಂಬಂಧದಲ್ಲಿ ಮಹತ್ವದ ಘಟನೆಗಳು ಉಂಟಾಗುವ ಸಂಭವವಿದೆಯೆಂದೂ ಪತ್ರಿಕೆಯಲ್ಲಿಯ ವರದಿಯಿಂದ ತೋರಿಬರುವದು.

ಮಹಾತ್ಮಾ ಗಾಂಧಿಯವರು ಹಿಂದು ಮುಸಲ್ಮಾನರೊಡನೆ ನಿಕಟ ಸಂಬಂಧ ಬೆಳೆಸಿಕೊಂಡು ತಮ್ಮ ಅಹಿಂಸಾ ತಂತ್ರದಿಂದ ಅವರಲ್ಲಿ ವಿಶ್ವಾಸ ಪ್ರಸ್ಥಾಪಿಸಲು ಶ್ರೀರಾಮಪೂರ ಸುತ್ತಲು ಪುನಃ ಸಂಚರಿಸಲು ನಿರ್ಧರಿಸಿದ್ದಾರೆ.





# ಪ್ರಗತಿಯ ಲಕ್ಷಣ

ಗುಜರಾತಿ ಹರಿಜನ ಬಂಧು ಪತ್ರದಲ್ಲಿ ನಾನು ಚೇಲೊಬ್ಬರಿಂದ ಬರೆದ ಇದೇ ಸಂಗತಿಯನ್ನು ನೋಡಿದ್ದೇನೆ. ಆದರೂ ಪುನರುಕ್ತಿಯ ದೋಷ ಬಂದರೂ ಶ್ರೀ ಪರೀಕ್ಷಿತಲಾಲ ಮುಜುಮದಾರರು ಶ್ಯಾಮಲಾಲಜಿಯವರಿಗೆ ಬರೆದ ಪತ್ರವನ್ನು ಶ್ಯಾಮಲಾಲಜಿಯವರು ನನಗೆ ಕಳಿಸಿದ್ದನ್ನು ಉದಾಹರಿಸಲಿಚ್ಛಿಸುತ್ತೇನೆ.

"ದೇವರ ದಯದಿಂದ ಕೊನೆಗೊಮ್ಮೆ ಸುಧಾರಕರಗಿತೆಂದು ತಿಳಿಸಲು ನನಗೆ ಆನಂದವಾಗುತ್ತದೆ. ನಾನು ಈ ಪತ್ರವನ್ನು ಬಾರ್ಡೋಲಿಯಿಂದ ಬರೆಯುತ್ತಿರುವೆ. ಹರಿಜನರಿಗೆ ಈ ವರ್ಷ ಗಾಂಧೀ ಜಯಂತಿಯಲ್ಲಿ ೪೦ ಬಾವಿಗಳನ್ನು ಮುಕ್ತದ್ವಾರ ಮಾಡಲಾಯಿತು. ಇದರ ಬಗ್ಗೆ ಜನರ ಮೇಲೆ ಸ್ವಲ್ಪವೂ ಒತ್ತಾಯ ಮಾಡಿಲ್ಲೆಂಬ ವಿಶೇಷವಾದ ಅಂಶ ಗಮನಿಸುವಂತಿದೆ. ಸ್ವಯಂಸ್ಫೂರ್ತಿಯಿಂದ ಜನರು ಈ ಕಾರ್ಯಕ್ರಮ ಕೈಕೊಂಡರು. ನಮ್ಮ ಕಾರ್ಯಕರ್ತರಿಗೆ ಎಲ್ಲ ಸ್ಥಳಗಳಲ್ಲಿ ಕಾರ್ಯಕ್ರಮಗಳಲ್ಲಿ ಹಾಜರ ಇರಲು ಆಗಲಿಲ್ಲ. ಸ್ಥಾನಿಕ ಜನರು ತಾವಾಗಿಯೇ ಹರಿಜನರನ್ನು ಆಮಂತ್ರಿಸಿ, ಅವರನ್ನು ಸಾರ್ವಜನಿಕ ಬಾವಿಗಳಿಗೆ ಕರೆದೊಯ್ದರು. ಇನ್ನೂ ನನ್ನ ಕಡೆಗೆ ಎಷ್ಟೋ ವರದಿಗಳು ಬರುತ್ತಲೇ ಇವೆ. ನಾನು ಎಷ್ಟೋ ಕಾರ್ಯಕ್ರಮಗಳಲ್ಲಿ ಹಾಜರ ಇದ್ದು ಜನರಲ್ಲಿದ್ದ ಅಭೂತಪೂರ್ವ ಜಾಗ್ರತಿಯನ್ನು ಕಣ್ಣಾರೆ ಕಂಡಿದ್ದೇನೆ. ಇದರ ಬಗ್ಗೆ ಮಹಾತ್ಮರಿಗೆ ಧನ್ಯವಾದಗಳನ್ನು ಎಷ್ಟು ಅರ್ಪಿಸಿದರೂ ಕಡಿಮೆಯೇ ಸೈ. ನಿಃಸಂದೇಹವಾಗಿ ಗಾಂಧೀಜಿಯವರ ಪ್ರಯತ್ನಗಳೂ ಇತ್ತೀಚಿಗೆ ಅವರು ಬರೆದ ಲೇಖಗಳೂ ಜನರಲ್ಲಿ ಈ ರೀತಿ ವಿಚಾರ ಕ್ರಾಂತಿಯನ್ನುಂಟುಮಾಡಿವೆ. ಹಳ್ಳಿಗಳಲ್ಲಿಯ ತರುಣರು ಮುಂದೆ ಬಂದು ಸಹಾಯ ಮಾಡಿದರು. ಹಿರಿಯರು ಇನ್ನೂ ಹಿಂದೆ ಉಳಿದಿರುವರು. ಆದರೆ ಕೆಲವರು ಈ ಶುಭಕಾರ್ಯಕ್ಕೆ ಹಿಂದೆ ಇದ್ದು ಆಶೀರ್ವಾದ ಕೊಟ್ಟರು. ಕೆಲವರು ಸುಮ್ಮನೆ ಕುಳಿತರು. ಆದರೆ ಯಾರೂ ವಿರೋಧ ಪ್ರದರ್ಶನ ಮಾಡಲಿಲ್ಲ. ಇಷ್ಟೇ ಅಲ್ಲ. ಎಷ್ಟೋ ಕಡೆಯಲ್ಲಿ ಅಂತರ ಜಾತೀಯ ಊಟದ ಏರ್ಪಾಟು ಸಹ ಆಗಿತ್ತು.

ಕೈರಾ ಜಿಲ್ಲೆಯ ರಾಜಧಾನಿಯಾದ ನಡಿಯಾದಲ್ಲಿ ಒಂದು ದೊಡ್ಡ ಭೋಜನ ಸಮಾರಂಭ ನೆರವೇರಿಸಲ್ಪಟ್ಟಿತು. ೧೯೨೮ರಲ್ಲಿ ಶ್ರೀ ಠಕ್ಕರ ಬಾಪಾರವರು ಹರಿಜನ ಕಸಗೂಡಿಸುವವರಿಗಾಗಿ ಕಟ್ಟಿಸಿದ ರಾಮದೇವರ ಗುಡಿಯ ಮುಂದೆ ಸುಮಾರು ೪೫೦ ಜನರು ಈ ಸಲ ಭೋಜನದಲ್ಲಿ ಭಾಗವಹಿಸಿದ್ದರು. ಅದರಲ್ಲಿ ಸುಮಾರು ೩೫೦ ಜನರು ಉಚ್ಚ ಜಾತಿಯ ಹಿಂದುಗಳು ತಮ್ಮ ತಮ್ಮ ಮನೆಗಳಲ್ಲಿ ಅಡಿಗೆ ಮಾಡಿಸಿ ಅದನ್ನು ಈ ಸಹಭೋಜನದಲ್ಲಿ ಊಟಮಾಡಲು ತಂದಿದ್ದರು. ಸುಮಾರು ೨೦೦ ಕಸಗೂಡಿಸುವವರೂ ಈ ಭೋಜನ ಸಮಾರಂಭದಲ್ಲಿ ಭಾಗವಹಿಸಿದ್ದರು. ನಿಜವಾಗಿಯೂ ಈ ಸಮಾರಂಭವು ಬಹು ಆನಂದದಾಯಕವಾಗಿತ್ತು. ಇಷ್ಟು ಜನರು ಒತ್ತಟ್ಟಿಗೆ ಸೇರಿ ಭೋಜನ ಮಾಡಿದರೂ ಆಹಾರ ಸೀದಾ ಕಾನೂನು ಭಂಗಮಾಡಿಲ್ಲ. ಯಾಕಂದರೆ ಎಲ್ಲರೂ ತಮ್ಮ ತಮ್ಮ ಆಹಾರವನ್ನು ತಮ್ಮ ತಮ್ಮ ಮನೆಗಳಿಂದ ತಂದಿದ್ದರು. ಆದರೆ ನಿಜವಾಗಿಯೂ ಕೈರಾ ಜಿಲ್ಲೆಯಲ್ಲಿ ಹಿಂದೆ ಎಂದೂ ಆಗಿರದಂಥ ದೊಡ್ಡ ಸಮಾರಂಭವಾದುದರಲ್ಲಿ ಸಂಶಯವಿಲ್ಲ.

'ಕಾಡಿ' ಎಂಬ ಊರು ಸನಾತನಿಗಳ ಗಂಡು ಮೆಟ್ಟಾಗಿತ್ತು. ಅಲ್ಲಿಯ ಒಂದು ದೊಡ್ಡ ಭಾವಿಯನ್ನು ಹರಿಜನರಿಗೆ ತೆರೆಯಲಾಗಿದೆ. ಬಡೋದೆಯ ಪಾದ್ರಂದಲ್ಲಿ ೧೫೦ ಜನರು ಹರಿಜನರೊಡನೆ ಕಲೆತು ಭೋಜನ ಮಾಡಿದರು. ಇನ್ನೂ ಎಷ್ಟೋ ಕಡೆಗೆ ಇಂಥ ಕಾರ್ಯಕ್ರಮಗಳಾಗಿವೆ. ಅವೆಲ್ಲವನ್ನೂ ನಾನು ಬರೆಯುವದು ಸಾಧ್ಯವಿಲ್ಲ.

ಈ ವಿಷಯದಲ್ಲಿ ನಾನು ಗುಜರಾತಿಯಲ್ಲಿ ಸುದೀರ್ಘ ಪತ್ರ ಬರೆದು 'ಬಾಪಾ' ರವರಿಗೆ ಇದೆಲ್ಲವನ್ನೂ ತಿಳಿಸುವ ಇಚ್ಛೆ ಇದೆ. ಆದರೆ ಅದನ್ನು ಓದುವದು ಅವರಿಗೆ ಕಠಿಣ ಹೋಗಬಹುದು. ದಯವಿಟ್ಟು ಈ ಪತ್ರವನ್ನು ಅವರಿಗೆ ಓದಿ ತೋರಿಸಿರಿ."

ನಾವು ಮುಟ್ಟಬೇಕೆಂದಿರುವ ಗುರಿಯ ದೃಷ್ಟಿಯಿಂದ ಈ ಪ್ರಗತಿಯು ತೀರ ಅಲ್ಪವೆಂದು ಹೇಳಬಹುದು. ಅಸ್ಪೃಶ್ಯತಾ ನಿವಾರಣೆಯ ಕಾಲದಲ್ಲಿ ಇಂದಿನ ವರೆಗೆ ಗುಜರಾತವು ತೀರ ಹಿಂದೆ ಉಳಿದಿತ್ತು. ಈ ದೃಷ್ಟಿಯಿಂದ ಅಲ್ಪ ಪ್ರಗತಿಯಾದರೂ ಈಗ ಅದು ಚಿರಕಾಲ ಉಳಿಯುವಂತಿದ್ದರೆ, ಮತ್ತು ಮುಂಬರುವ ಒಳ್ಳೇ ದಿನಗಳ ಸೂಚಕವಾಗಿದ್ದರೆ, ಶ್ರೀ ಪರೀಕ್ಷಿತಲಾಲರು ಈ ಅಲ್ಪ ಪ್ರಗತಿಗೆ ಅಭಿಮಾನಪಡುವದನ್ನು ಕ್ಷಮಿಸಬಹುದು. ಅಸ್ಪೃಶ್ಯತೆಯನ್ನು ನಾಶಮಾಡುವ ಒಂದೊಂದು ಹೆಜ್ಜೆಯೂ ಹಿಂದೂ ಧರ್ಮದ ಶುದ್ಧೀಕರಣದತ್ತ ಸಾಗಿದ ಹೆಜ್ಜೆಯೆಂದು ಹೇಳಬಹುದು.

ಶ್ರೀ ರಾಮಪುರ — ಮೋ. ಕ. ಗಾಂಧಿ
೩೦—೧೧—೧೯೪೬

# ಪ್ರಶ್ನೆ—ಪೆಟ್ಟಿಗೆ

ಪ್ರಶ್ನೆ—ರೇಲ್ವೆ ನಿಲ್ದಾಣಗಳಲ್ಲಿ ಹಿಂದೂ ನೀರು (ಚಹಾ) ಮುಸಲ್ಮಾನ ನೀರು (ಚಹಾ) ಎಂದು ಕೂಗಾಡುವದನ್ನೂ ಬಂದುಮಾಡುಲು ಕಾಂಗ್ರೆಸ ಮಂತ್ರಿಗಳೂ ಪ್ರಯತ್ನಿಸಿದ್ದು ಸ್ತುತ್ಯವಾಗಿದೆ. ಆದರೆ ಹಿಂದೂ ಮತ್ತು ಇತರ ಗೃಹಸ್ಥರನ್ನು ಶ್ರೀಯುತ ಅಥವಾ ಶ್ರೀಮಾನ್ ಎಂದೂ ಜನಾಬ ಸಾಹೇಬ ಎಂದು ಮುಸಲ್ಮಾನ ಗೃಹಸ್ಥರನ್ನೂ ಶಿಷ್ಟಾಚಾರಕ್ಕಾಗಿ ಕರೆಯುವ ಪದ್ಧತಿಯನ್ನು ಸ್ವತಃ ಗಾಂಧೀಜಿಯವರು ಪ್ರಾರಂಭಿಸಿರುವದೂ ಅದನ್ನೇ ಉಳಿದ ಕಾಂಗ್ರೆಸಿಗರು ಅನುಸರಿಸುತ್ತಿರುವದೂ ನೋಡಿದರೆ ನನಗೆ ಬೇರೆ ಬೇರೆ ಧರ್ಮದ ಜನರು ತಮ್ಮ ಅಂತರಾಳದಲ್ಲಿ ಹುದುಗಿದ ಜಾತೀಯ ಭಾವನೆಯನ್ನು ಸಂಪೂರ್ಣವಾಗಿ ಕಿತ್ತು ಬಿಸುಡಲು ಅಸಮರ್ಥರಾಗಿದ್ದಾರೆಂದು ಅನಿಸುವದು. ಆದುದರಿಂದಲೇ ನಾವು ಯಾವದೇ ಒಂದು ಸಮಯದಲ್ಲಿ ಎಂದಾದರೂ ಒಂದುದಿನ ನಮ್ಮ ಕೃತಿಯಲ್ಲಿ ಈ ಸುಪ್ತ ಜಾತೀಯ ಭಾವನೆಯನ್ನು ತಪ್ಪಿ ಪ್ರಕಟ ಮಾಡುವೆವು. ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವನ್ನು ದಯವಿಟ್ಟು ಕೊಡುವಿರಾ?

ಉತ್ತರ—ಇದು ಒಳ್ಳೇ ಪ್ರಶ್ನೆ. ಸ್ವತಃ ನನಗೆ ಜಾತಿಸೂಚಕವಾದ ಬೇರೆ ಬೇರೆ ಶಬ್ದಗಳಿಂದ ಜನರನ್ನು ಸಂಬೋಧಿಸುವದು ಸಮಂಜಸವೆನಿಸುವದಿಲ್ಲ. ಆದರೆ ಸದ್ಯಕ್ಕೆ ಉಂಟಾಗಿರುವ ವಿಷಮ ವಾತಾವರಣದಲ್ಲಿ ಯೋಗ್ಯವಾದ ಬೇರೊಂದ ಪದ್ಧತಿಯನ್ನು ಸೂಚಿಸಲು ಇದು ಅನುಕೂಲ ಸಮಯವಾಗಿಲ್ಲ. ಒಂದು ವಿಶಿಷ್ಟ ಜಾತಿಯ ಜನರು ಸೂಚಿಸಿದ್ದಾರೆಂಬ ಒಂದೇ ಕಾರಣದಿಂದ ಎರಡನೇ ಜಾತಿಯವರು ಅದನ್ನು ತಿರಸ್ಕರಿಸಬಹುದು. ಆದರೆ ವಾಚಕರಲ್ಲಿ ಯಾರಾದರೂ ಎರಡೂ ಧರ್ಮದವರಿಗೂ ಸಾಮಾನ್ಯವಾಗಿ ಕರೆಯಲು ಯೋಗ್ಯವಾದ ಭಾರತದಲ್ಲಿ ಪ್ರಚಲಿತವಿರುವ ಯಾವದೇ ಒಂದು ಶಬ್ದವನ್ನು ಸೂಚಿಸಿದರೆ ಅದರ ಬಗ್ಗೆ ವಿಚಾರಮಾಡಲು ಅನುಕೂಲವಾಗುವದು.

ನನ್ನ ಮಟ್ಟಿಗೆ ಎಲ್ಲ ಪುರುಷರನ್ನು ಅವರ ಜಾತಿ ಯಾವದೇಯಿರಲಿ ಭಾಯಿಜಿ, ಅಥವಾ ಭೈಯಾಜಿ, ಅಥವಾ ಭೈಯಾಸಾಹೇಬ, ಎಂದು ಕರೆಯುವದು ಸರಿಯೆಂದು ಅನಿಸುವದು. ಅದರಂತೆ ಎಲ್ಲ ಮಹಿಳೆಯನ್ನೂ ಬಾಯಿಜೀ ಎಂದೂ ಕರೆಯಬಹುದು. ಇದರಲ್ಲಿ 'ಜೀ' ಮತ್ತು 'ಸಾಹೇಬ' ಇವುಗಳನ್ನು ಬೇಕಾದರೆ ಬರೆಯುವವನು ತನ್ನ ಇಚ್ಛೆಗೆ ಬಂದಂತೆ ಉಪಯೋಗಿಸಬಹುದು ಇಲ್ಲವೆ ಬಿಡಬಹುದು. ಆದರೆ ಗಾಂಧೀಜಿಯವರು ಪ್ರಾರಂಭಿಸಿದ ಪದ್ಧತಿಯನ್ನು ಹರಿಜನ ಪತ್ರದಲ್ಲಿ ಅವರು ಬೇರೆ ಪದ್ಧತಿ ಸೂಚಿಸುವವರೆಗೆ ಹಾಗೆಯೇ ಅನುಸರಿಸಲಾಗುವದು.

ವಾಪಿ— ಕಿ. ಘ. ಮಶ್ರುವಾಲಾ
೭ ನೇ ಡಿಸೆಂಬರ ೧೯೪೬

# ಪುನಃ ಪ್ರಾಚೀನತೆಯ ನಾಗರಿಕತೆಯತ್ತ

ಕಳೆದ ಮಹಾಯುದ್ಧದಲ್ಲಿ ಆಕಾಶದಿಂದೆಸೆದ ಬಾಂಬುಗಳಿಂದ ನಗರಗಳು ಉಧ್ವಸ್ತವಾಗುತಿದ್ದಾಗ ಜನರು ಸುರಕ್ಷಿತತೆಗಾಗಿ ನೆಲಮಾಳಿಗೆಗಳನ್ನು ಆಶ್ರಯಿಸುತಿದ್ದರು. ಮಾನವನು ಪುನಃ ಪಾಷಾಣಯುಗದ ನಾಗರಿಕತೆಯತ್ತ ನಡೆದಿದ್ದಾನೆಂದು ಒಬ್ಬನು ಆಗ ಬರೆದಿದ್ದನು.

ಏನೇ ಆಗಲಿ ನಾವು ಅವರಿಗಿಂತ ಪ್ರಗತಿ ಹೊಂದಿದ್ದೇವೆ. ಆಫ್ರಿಕೆಯ ಮತ್ತು ಪಶ್ಚಿಮ ಏಶಿಯಾದ ಕೆಲ ರಾಷ್ಟ್ರಗಳಲ್ಲಿ ಕ್ರಿಸ್ತ ಜನನದ ಮೊದಲು ಇದ್ದ ನಾಗರಿಕತೆಯ ಸಮಸಮೀಪದಲ್ಲಿದ್ದೇವೆಂದು ನಮಗೆ ಈ ಸುದ್ದಿಗಾರನು ಕಳಿಸಿರುವ ಭಾರತದ ನಗರವೊಂದರ ವರ್ಣನೆಯಿಂದ ಕಂಡುಬರುವದು.

"ಪರಸ್ಪರದಲ್ಲಿ ವಿಶ್ವಾಸವಿಲ್ಲ. ಆದರೆ ಪುನಃ ಕೊಂಡರೆ ಪ್ರಾರಂಭವಾಗುವಂಥದೇನಾದರೂ ಹೊಸದಾಗಿ ಪ್ರಾರಂಭವಾಗದಿದ್ದರೆ ಸದ್ಯದ ಪರಿಸ್ಥಿತಿಯು ನಮಗೆ ವೈಯುಂಡು ಹೋಗಬಹುದು.

"ಪೇಟೆಗಳಲ್ಲಿ ಕೆಲವು ನಿರ್ದಿಷ್ಟ ಸ್ಥಳಗಳಲ್ಲಿ ಪೋಲೀಸರನ್ನಿಡಲಾಗಿದೆ. ಹಿಂದುಗಳು ಒತ್ತಟ್ಟಿಗೆ ಮುಸ್ಲಿಂರು ಇನ್ನೊತ್ತಟ್ಟಿಗೆ ನೆರೆಯುತ್ತಾರೆ ಗಂಟೆಗಂಟೆಗಳ ಕಾಲ ನಿಂತುಕೊಂಡೇ ತಮ್ಮ ವ್ಯವಹಾರವನ್ನು ಅವರು ನಡೆಸುತ್ತಾರೆ. ಲಕ್ಷಾವಧಿ ರೂಪಾಯಿಗಳ ವ್ಯಾಪಾರ ನಡೆಯುತ್ತದೆ. ಒಂದು ಜಾತಿಯ ಕೂಲಿಗಳು ಇನ್ನೊಂದು ಜಾತಿಯವರಿಗೆ ನಿರ್ದಿಷ್ಟಗಡಿಯಲ್ಲಿ ಸರಕುಗಳನ್ನು ಒಪ್ಪಿಸುತ್ತಾರೆ. ಸಂಜೆಗೆ ತಮ್ಮ ವ್ಯವಹಾರವನ್ನು ಮುಗಿಸಿಕೊಂಡು ಹಿಂದುಗಳು ಹಿಂದುಸ್ತಾನದ ಕಡೆಗೆ, ಮುಸ್ಲಿಂರು ತಮ್ಮ ಪಾಕಿಸ್ತಾನದ ಕಡೆಗೆ ಹಿಂತಿರುಗುತ್ತಾರೆ. ಹೀಗೆ ಒಂದು ಜಾತಿಯವರು ಇನ್ನೊಂದು ಜಾತಿಯವರ ಪ್ರದೇಶವನ್ನು ಪ್ರವೇಶಿಸದೆ ವ್ಯವಹಾರ ನಡೆಯುತ್ತದೆ.

"ನಿಜ, ಇದರಿಂದ ವ್ಯವಹಾರಕ್ಕೆ ಹಾನಿಯಾಗುವದು. ಪೇಟೆಗಳಲ್ಲಿ ಗಿರಾಕಿಗಳಿಗೆ ಸಂಚಾರಸ್ವಾತಂತ್ರ್ಯವಿರುವದಿಲ್ಲ. ಅಲ್ಲದೆ ಕೆಲಸ ಮಾಡಲು ಸಾಕಷ್ಟು ಜನರೂ ದೊರೆಯುವದಿಲ್ಲ...."

ಆದ್ದರಿಂದ ಈಗ ನಾಗರಿಕತೆಯು ಈ ತಟಸ್ಥ ಪ್ರದೇಶದ ಸ್ಥಿತಿಯಿಂದ ಒಂದು ಹೆಜ್ಜೆ ಮುಂದೆ ಹೋಗಬೇಕಾಗಿದೆ. ಕೇವಲ ಸಂತೆಯ ದಿನಗಳಲ್ಲಾದರೂ ಒಂದು ಜಾತಿಯ ಜನರು ಇನ್ನೊಂದು ಜಾತಿಯವರ ಪ್ರದೇಶವನ್ನು ಪ್ರವೇಶಿಸುವ ಸ್ವಾತಂತ್ರ್ಯ ಪಡೆದಿರಬೇಕು ಇಲ್ಲವೆ ಅರೇಬಿಯಾದಲ್ಲಿ ಇಸ್ಲಾಂ ಧರ್ಮವು ಸ್ಥಾಪಿತವಾಗುವ ಪೂರ್ವದಲ್ಲಿದ್ದಂತೆ ವರ್ಷದಲ್ಲಿ ಕೆಲದಿನಗಳ ಮಟ್ಟಿಗಾದರೂ ವೈರವನ್ನು ಮರೆಯಲು ಉಭಯ ಪಕ್ಷಗಳು ಸಮ್ಮತಿಸಬೇಕು! ಇದನ್ನು ಸಾಧಿಸಲು ಶಕ್ಯವಾದರೆ ನಿಜವಾಗಿಯೂ ಘನಪ್ರಗತಿಯನ್ನು ಸಾಧಿಸಿದಂತಾಗುವದು. ಇದಕ್ಕು ಮುಂದಿನ ಉಪಾಯವೆಂದರೆ ಮಹಮ್ಮದ ಪೈಗಂಬರರು ಪರಕೀಯರ ವಿತ್ತ ಜೀವಿತಗಳ ರಕ್ಷಣೆಗಾಗಿ 'ಹಿಲ್ ಫಲ್ ಫಜಲ' ರಕ್ಷಕ ದಳವನ್ನು ಮಕ್ಕಾದಲ್ಲಿ ಸ್ಥಾಪಿಸಿದಂತೆ ನಾವು ಇಲ್ಲಿ ಪರಧರ್ಮೀಯರ ರಕ್ಷಣೆಗಾಗಿ ಒಂದು ದಳವನ್ನು ಕಟ್ಟಬೇಕು. ಪರಕೀಯರು ಕಾಯ್ದಿಟ್ಟ ದಿನಗಳನ್ನು ಬಿಟ್ಟು ಇತರ ದಿನಗಳಲ್ಲಿ ಬೇರೆಯವರ ಗಡಿಯನ್ನು ಪ್ರವೇಶಿಸಿದರೆ ಅವರನ್ನು ರಕ್ಷಿಸಲು 'ಹಿಲ್ ಫಲ್ ಫಜಲ್' ವು ರಚಿತವಾಗಿತ್ತು.

ನಾವು ಎಂಥ ದುರ್ಗತಿಗಿಳಿದಿದ್ದೇವೆ. ಈ ದುಸ್ಥಿತಿ ಹಿಂಗಬೇಕಾದರೆ ಉಭಯ ಪಕ್ಷಗಳಲ್ಲಿಯ ಕೆಲವರು ಪರಸ್ಪರರನ್ನು ನಂಬುವ ಗಂಡಾಂತರಕ್ಕೆ ಸಿದ್ಧರಾಗಬೇಕು ಎಂಬುದು ಸ್ಪಷ್ಟವಿದೆ. ವಿಶ್ವಾಸದ ಮೇಲೆ ಎಲ್ಲ ವ್ಯವಹಾರ ನಡೆಯುವದು ಮತ್ತು ಹೀಗೆ ನಂಬಿಕೆಯಿಡುವದರಲ್ಲಿ ಎಷ್ಟು ಗಂಡಾಂತರವಿದೆಯೆಂಬುದು ಉದ್ದಿಮೆದಾರರಿಗೆ ತಿಳಿದ ಮಾತಾಗಿದೆ. ಅದರೂ ಅವರು ಕೇವಲ ಬಾಯಿಮಾತಿನ ಮೇಲೆ ಸಾವಿರಾರು ರೂ.ಗಳ ವ್ಯವಹಾರ ನಡೆಸುತ್ತಾರೆ. ಅಮೂಲ್ಯ ವಸ್ತುಗಳನ್ನು ಕೊಡುತ್ತಾರೆ. ಅಂಥ ಪ್ರಸಂಗದಲ್ಲಿ ಹಣವನ್ನಾಗಲಿ ಪತ್ತನ್ನಾಗಲಿ ಕಳೆದುಕೊಳ್ಳುವ ಗಂಡಾಂತರವಿರುವದಷ್ಟೆ. ಅವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಪ್ರಾಣಾಪಾಯದ ಗಂಡಾಂತರವನ್ನೂ ಎದುರಿಸಲು ಪ್ರಾರಂಭಿಸಬೇಕು.

ಕಿ. ಘ. ಮ.
(ಮೂಲ ಗುಜರಾತಿಯಿಂದ ಸಂಗ್ರಹಿಸಿದುದು)

# ವಾಲ್ಮೀಕಿಯ ವಿಜಯ

( ೭ ನೇ ಪುಟದಿಂದ )

ಶಸ್ತ್ರಾಸ್ತ್ರಗಳೇನೂ ಇರಲಿಲ್ಲ. ಆದರೆ ಅವನ ಅಸ್ತ್ರಗಳೆಂದರೆ ಅವನ ಸಂಗೀತಕಲೆ ಮತ್ತು ಎಲ್ಲರೂ ಒಂದೆ ಎಂಬ ಘೋಷಣೆ ತನ್ನ ಹಾಡುಗ ಅನುಯಾಯಿಗಳೊಂದಿಗೆ ಅವನು ಪ್ರತಿಯೊಂದು ಬ್ರಾಹ್ಮಣ ಆಶ್ರಮಕ್ಕೆ ಪ್ರತಿಯೊಂದು ಕ್ಷತ್ರಿಯ ರಾಜ್ಯಕ್ಕೆ ಹೋಗಿ ಅಲ್ಲಿ ಶಾಂತಿ, ಐಕ್ಯ, ಪ್ರೇಮ ಇವುಗಳ ಸಂದೇಶವನ್ನು ಬೀರಿದನು. ಅವನ ಪದಪದ್ಯಗಳೂ ಸಂಗೀತವೂ ಕೇಳುವವರ ಹೃದಯವನ್ನು ಕರಗಿಸಿದವು. ಇದರಿಂದ ಶಾಂತಿ ಮತ್ತು ಐಕ್ಯದ ದೊಡ್ಡ ಆಂದೋಲನವೇ ಪ್ರಾರಂಭವಾಯಿತು. ವಸಿಷ್ಠ ಮತ್ತು ವಿಶ್ವಾಮಿತ್ರರಲ್ಲಿ ಒಡಂಬಡಿಕೆಯಾಯಿತು. ಆದರೆ ಪರಶುರಾಮನು ಎಷ್ಟೋ ದಿನಗಳವರೆಗೆ ಈ ಸಂದೇಶಕ್ಕೆ ಕಿವಿಗೊಡದೆ ಮುಂದೆ ಸಾಗಿದನು. ಆದರೆ ಕ್ಷತ್ರಿಯರ ನಿವರ್ಮೂಲನಮಾಡಿರಿ ಎಂಬ ಪರಶುರಾಮನ ಘೋಷಣೆಗೆ ಯಾರೂ ಬೆಂಬಲ ನೀಡದಂತಾದುದೂ ಈ ಘೋಷಣೆಯು ಸತ್ವವಿಹೀನವಾದುದೂ ತಿಳಿದು ಬರಲು ಅತನು ತಾನಾಗಿಯೇ ರಾಜಕೀಯ ರಂಗದಿಂದ ಕಾಲ್ತೆಗೆಯಬೇಕಾಯಿತು. ವಸಿಷ್ಠ ವಿಶ್ವಾಮಿತ್ರರು ಅಯೋಧ್ಯಾ, ಮಿಥಿಲಾ, ಮೊದಲಾದ ಕ್ಷತ್ರಿಯ ಮಿತ್ರರಾಷ್ಟ್ರಗಳಿಗೆ ಬೆಂಬಲ ಕೊಡಹತ್ತಿದರು. ವಾಲ್ಮೀಕಿಯ ಕಾರ್ಯವು ಈ ರೀತಿ ಯಶಸ್ವಿಯಾಗಿ ಕೊನೆಗೊಂಡ ಬಳಿಕ ಅವನಿಗೆ ಬ್ರಾಹ್ಮಣ ಕ್ಷತ್ರಿಯ ಐಕ್ಯದಿಂದ ಆರ್ಯರು ದೊರಕಿಸಬಹುದಾದ ಉನ್ನತ ಸ್ಥಿತಿಯನ್ನು ವರ್ಣಿಸುವ ರಾಮಾಯಣವನ್ನು ಬರೆಯಲು ಬಿನ್ನವಿಸಲಾಯಿತೆಂದು ಆ ಕಾದಂಬರಿಯಲ್ಲಿ ಹೇಳಲಾಗಿದೆ.

ಅದರಂತೆಯೇ ಹಿಂದೂ-ಮುಸಲ್ಮಾನರು ವಾಲ್ಮೀಕಿಯ ಘೋಷಣೆಯಂತೆ 'ನಾವು ಎಲ್ಲರೂ ಒಂದೇ' ಎಂಬುದನ್ನು ಅಂಗೀಕರಿಸಿ ಆ ದಿಶೆಯಲ್ಲಿ ಸಂಘಟನೆ ನಡೆಸಿದ್ದಾದರೆ ಕೊನೆಗೆ ಯಶಸ್ಸು ಕಟ್ಟಿಟ್ಟದ್ದೇ ಎಂದು ಹೇಳಲು ಏನೂ ಸಂಶಯವಿಲ್ಲ.

ವಾಪಿ— ಕಿಶೋರಲಾಲ ಮಶ್ರುವಾಲಾ
೭ನೇ ಡಿಸೆಂಬರ ೧೯೪೬

## ಜಾತೀಯ ಸೌಹಾರ್ದ ಬೆಳಿಸಲು ನೌಖಾಲಿಯಲ್ಲಿ ಉಳಿಯುವೆ

### ಪ್ರಾರ್ಥನಾನಂತರ ಮಹಾತ್ಮರ ಭಾಷಣ

ತಾ. ೨೪ ದಿನ ಶ್ರೀ ರಾಮಪುರದಲ್ಲಿ ಪ್ರಾರ್ಥನೆಯ ನಂತರ ಮಹಾತ್ಮಾ ಗಾಂಧಿಯವರು ಭಾಷಣಮಾಡುತ್ತ ಹೀಗೆ ಹೇಳಿದರು.

"ಬಂಗಾಲ ಸರಕಾರದ ಹೆಸರು ಕೆಡಿಸಿ ಅಪಕೀರ್ತಿಗೆ ಗುರಿ ಮಾಡಲು ನಾನು ಇಲ್ಲಿಗೆ ಬಂದಿಲ್ಲ ಬಂಗಾಲ ಸರಕಾರದವರಿಗೆ ನಾನು ನೌಖಾಲಿಯಲ್ಲಿರುವದು ತೊಂದರೆಯನ್ನುಂಟುಮಾಡುವದೆಂದು ಅನಿಸಿದರೆ ನಾನು ಪರಿಸ್ಥಿತಿಯನ್ನು ಪುನರ್ವಿಚಾರಿಸಲು ಸಿದ್ಧನಿದ್ದೇನೆ. ಅದರೆ ಮಂತ್ರಿಗಳಿಂದ ಈ ತರದ ತಕರಾರು ನನ್ನ ಕಡೆಗೆ ಬಂದಿಲ್ಲ ಬಂಗಾಲ ಸರಕಾರದ ಎಷ್ಟೋ ಮಂತ್ರಿಗಳೂ ಅಧಿಕಾರಿಗಳೂ ನನ್ನ ಮಿತ್ರರಿದ್ದಾರೆ. ನಾನು ಇಲ್ಲಿ ಇರುವದು ಅವರು ಮಾಡುತ್ತಿರುವ ಒಳ್ಳೇ ಕೆಲಸದಲ್ಲಿ ವಿಘ್ನವನ್ನೊಡ್ಡಹತ್ತಿದೆ ಎಂದು ಅವರಿಗೆ ಅನಿಸಿದರೆ ಅವರು ಹಾಗೆ ನನಗೆ ತಿಳಿಸಲು ಅಡ್ಡಿ ಇಲ್ಲ.

ಬಂಗಾಲ ಸರಕಾರದ ವಿರುದ್ಧ ಉಪವಾಸವನ್ನೇಕೆ ಕೈಕೊಳ್ಳಲಿಕ್ಕಿಲ್ಲವೆಂದು ಕೆಲವು ಜನರು ನನ್ನನ್ನು ಕೇಳುತ್ತಾರೆ. ನಾನು ಹಾಗೆ ಬಂಗಾಲ ಸರಕಾರದ ವಿರೋಧವಾಗಿ ಉಪವಾಸ ಕೈಕೊಂಡಿದ್ದರೆ ಬಂಗಾಲ ಮಂತ್ರಿ ಮಂಡಳದ ಹೆಸರು ಕೆಡಿಸಿದಂತಾಗುತ್ತಿತ್ತು. ನನಗೆ ಬಂಗಾಲ ಮಂತ್ರಿಗಳ ಹೆಸರು ಕೆಡಿಸುವದು ಬೇಕಾಗಿಲ್ಲ. ನಾನು ಮುಸ್ಲಿಂಲೀಗಿನ ಅಥವಾ ಲೀಗ ಮಂತ್ರಿ ಮಂಡಳದ ಹೆಸರು ಕೆಡಿಸಲು ಇಲ್ಲಿಗೆ ಬಂದಿಲ್ಲ. ಅಕ್ಟೋಬರ ತಿಂಗಳದ ಜಾತೀಯ ಸೌಹಾರ್ದಕ್ಕೆ ಭಂಗ ಬಂದಿದೆ. ಅದನ್ನು ಪುನಃ ಪ್ರಸ್ಥಾಪಿಸುವದೇ ನನ್ನ ನೌಖಾಲಿಯಲ್ಲಿ ಇರುವ ಒಂದೇ ಒಂದು ಉದ್ದೇಶವಾಗಿದೆ. ಬಿಹಾರ ಮುಸ್ಲಿಂಲೀಗಿನವರು ಬಿಹಾರ ಗಲಭೆಗಳ ಬಗ್ಗೆ ಸಿದ್ಧಪಡಿಸಿದ ವರದಿಯು ಮೊನ್ನೆ ನನಗೆ ಮುಟ್ಟಿದೆ. ನಾನು ಅದನ್ನು ಅಸ್ಥೆಯಿಂದ ಓದಿರುವೆ. ಆ ವರದಿಯಲ್ಲಿ ಬರೆದ ಅರ್ಧದಷ್ಟು ಸತ್ಯವಿದ್ದರೂ ನನಗೆ ಈ ಜಗತ್ತಿನಲ್ಲಿ ಬದುಕಿ ಉಳಿಯಲು ಅಧಿಕಾರವೇ ಇಲ್ಲ. ಜನರ ಆಸ್ತಿಯ ಹಾಗೂ ಪ್ರಾಣಹಾನಿಯ ವಿವರಗಳನ್ನು ಅತಿ ರಂಜಿತವಾಗಿ ಆ ವರದಿಯಲ್ಲಿ ಕೊಡಲಾಗಿದೆ.

ಬಿಹಾರಕ್ಕೆ ನೀವು ಹೋಗದೆ ಬಂಗಾಲಕ್ಕೆ ಬರುವ ಕಾರಣವೇನು ಎಂದು ಕೆಲವರು ಕೇಳುತ್ತಾರೆ. ನಾನು ಅವರಿಗೆ ಇಷ್ಟೇ ಉತ್ತರ ಕೊಡಬಲ್ಲೆ. ನಾನು ಶ್ರೀರಾಮಪುರದಲ್ಲಿದ್ದರೂ ಬಿಹಾರದಲ್ಲಿಯ ಕೆಲಸ ಮಾಡಬಲ್ಲೆ. ಬಿಹಾರದಲ್ಲಿ ಕಾಂಗ್ರೆಸ ಮಂತ್ರಿಮಂಡಲವಿದೆ. ಅವರ ಮೇಲೆ ನಾನು ಇಲ್ಲಿ ಕುಳಿತು ಗಲಭೆಯಲ್ಲಿ ಹಾನಿಗೀಡಾದ ಜಾತಿಯ ಜನರಿಗೆ ಯೋಗ್ಯ ಪರಿಹಾರಕೊಡಲು. ಜಾತೀಯ ಸೌಹಾರ್ದ ಸ್ಥಾಪಿಸಲು ಒತ್ತಾಯಪಡಿಸಬಹುದು. ಬಿಹಾರದಲ್ಲಿ ಗಲಭೆಯಾದ ಸುದ್ದಿ ಕೇಳಿದ ಕೂಡಲೆ ನಾನು ನನ್ನ ಆಹಾರವನ್ನು ಕಡಿಮೆ ಮಾಡಿದೆ. ಅಲ್ಲಿಯ ಪರಿಸ್ಥಿತಿ ಶಾಂತವಾದ ಸುದ್ದಿಯನ್ನು ಕೇಳಿದನಂತರವೇ ಪುನಃ ಆಹಾರಸೇವನೆ ಪ್ರಾರಂಭಿಸಿದ್ದೇನೆ ಅದುದರಿಂದ ನಾನು ಬಿಹಾರಕ್ಕೆ ಹೋಗುವ ಅಗತ್ಯ ಇರಲಿಲ್ಲವೆಂದು ನನಗೆ ಅನಿಸುವದು.

ನನಗೆ ತಂತಿಗಳೂ ಪತ್ರಗಳೂ ದಿನಾಲು ಬರುತಿದ್ದು ಅದರಲ್ಲಿ ನೌಖಾಲಿಯಲ್ಲಿ ನಾನು ಇರುವದರಿಂದ ಜಾತೀಯ ಸೌಹಾರ್ದ ಸಾಧಿಸಲು ಅಶಕ್ಯವಾಗಹತ್ತಿದೆ ಎಂದು ಬರೆದಿರುತ್ತಾರೆ. ಜನರಲ್ಲಿ ನಾನು ಇಲ್ಲಿ ಇದ್ದು ಸತ್ಯಾಗ್ರಹ ಪ್ರಾರಂಭಿಸುವೆನೆಂದು ಸುಳ್ಳು ಸುದ್ದಿ ಹರಡಿದೆ. ನಾನು ಇಂಥ ಸುಳ್ಳು ಸುದ್ದಿಗಳನ್ನು ಅಲ್ಲಗಳೆಯಲೇ ಬೇಕು. ಸತ್ಯಾಗ್ರಹಿಯಾದವನು ತನ್ನ ಯೋಜನೆಗಳನ್ನು ಮೊದಲು ತನ್ನ ವಿರೋಧಿಪಕ್ಷಕ್ಕೆ ತಿಳಿಸಿ ಆ ಮೇಲೆ ಸತ್ಯಾಗ್ರಹ ಹೂಡುವದು ಅವನ ಧರ್ಮವಾಗಿದೆ. ಇದನ್ನು ಬಿಟ್ಟು ಗುಪ್ತವಾಗಿ ಏನಾದರೊಂದು ಮಾಡುವದು ಸತ್ಯಾಗ್ರಹವಲ್ಲ.

ಅದೊಂದು ದುರಾಗ್ರಹವೇ ಸೈ! ನೌಖಾಲಿಯಲ್ಲಿ ಜಾತೀಯ ಸೌಹಾರ್ದ ಸ್ಥಾಪಿಸುವದು ಈಗ ನನ್ನ ಆದ್ಯ ಕರ್ತವ್ಯವಾಗಿದೆ. ಇದು ಸಾಧಿಸಿದ್ದಾದರೆ ನಾನು ಸಂತೋಷದಿಂದ ಕೂಡಲೇ ಹೊರಟುಹೋಗುವೆ. ನನಗೆ ಬೇರೆ ಕಡೆಗೆ ಮಹತ್ವದ ಕೆಲಸಗಳಿದ್ದರೂ ಇಲ್ಲಿ ಕೈಕೊಂಡ ಕೆಲಸ ಅತಿ ಮಹತ್ವದ್ದೆಂದು ಅನಿಸುವದರಿಂದ ಇಲ್ಲಿ ಇರಬೇಕಾಗಿದೆ.

ದಿಲ್ಲಿಯಲ್ಲಿ ಈಗ ಮಹತ್ವದ ನಿರ್ಣಯ ಕೈಕೊಳ್ಳಬೇಕಾಗಿದೆ. ನಾನು ಅಲ್ಲಿ ಇರಬೇಕೆಂದು ಅನೇಕರು ಅಪೇಕ್ಷಿಸುತ್ತಾರೆ. ಆದರೆ ನಾನು ಕೈಕೊಂಡ ಜಾತೀಯ ಸೌಹಾರ್ದ ಸ್ಥಾಪಿಸುವ ಕಾರ್ಯದಲ್ಲಿ ಯಶಸ್ವಿಯಾದರೆ ಅದರ ಪರಿಣಾಮ ಬಂಗಾಲದ ಮೇಲೆ ಅಷ್ಟೇ ಅಲ್ಲ, ಇಡೀ ಹಿಂದುಸ್ತಾನ, ಅದೇಕೆ ಜಗತ್ತಿನ ಮೇಲೂ ಆಗಬಹುದು."

## ಶಂಕರಾಚಾರ್ಯರಂತೆ ಗಾಂಧೀಜಿಯ ಪಾದಸಂಚಾರ

ಹೊಸ ವರುಷದೊಂದಿಗೆ ಮಹಾತ್ಮರ ಸಂಚಾರ ಕಾರ್ಯಕ್ರಮವು ಪ್ರಾರಂಭವಾಗಬಹುದು. ಪಂ. ನೆಹರೂರೊಡನೆ ಮಹಾತ್ಮರ ಮಾತುಕತೆಗಳು ೨೮ ನೇ ತಾರೀಖಿನೊಳಗಾಗಿ ಮುಗಿದರೆ ಗಾಂಧೀಜಿಯವರ ಸಂಚಾರ ಕಾರ್ಯಕ್ರಮವು ಅದಕ್ಕೂ ಬೇಗನೆ ಪ್ರಾರಂಭವಾಗಬಹುದು.

ಈ ಸಂಚಾರಕ್ಕಾಗಿ ಎಲ್ಲ ಸಿದ್ಧತೆಗಳೂ ಮುಗಿದಿವೆ. ಮಹಾತ್ಮರ ದಾಂಡೀಯಾತ್ರೆಗಿಂತ ಈ ಸಂಚಾರವು ಕಠಿನ ಯಾತ್ರೆಯಾಗಬಹುದು. ಶ್ರೀ ಶಂಕರಾಚಾರ್ಯರು. ಛೋಟಾನಾಗಪುರದ ಗೋಂಡಾರಣ್ಯದೊಳಗಿಂದ | ಹಾಯ್ದು ಕಾಶಿಯಾತ್ರೆಯನ್ನು ಮಾಡಿದಂತೆ ತಮ್ಮ ಈ ಸಂಚಾರವಾಗುವದೆಂದು ಮಹಾತ್ಮರು ಹೇಳುತ್ತಿದ್ದಾರೆ. ಮಹಾತ್ಮರಿಗೆ ಇದೊಂದು ದಿವ್ಯವೇ ಆಗಿದೆ. ಇದರಲ್ಲಿ ಅವರು ಯಶಸ್ವಿಯಾದರೆ ಅವರ ಜೀವನದ ಧ್ಯೇಯವೆ ಸಫಲವಾಗುವದು. ಚಳಿಗಾಲದ ಕಾಲಗಳಿ ಬೀಸುತ್ತಿದ್ದರೂ ಮಹಾತ್ಮರು ತಮ್ಮೊಡನೆ ತೀರ ಕಡಿಮೆ ವಸ್ತುಗಳನ್ನೂ ಒಯ್ಯಲಿರುವರು. ಪ್ರಸಂಗ ಬಂದರೆ ಮಹಾತ್ಮರು ತಮ್ಮ ಅಡುಗೆಯನ್ನು ತಾವೇ ಮಾಡಿಕೊಳ್ಳುವರು. ಮಹಾತ್ಮರೇ ಒಮ್ಮೆ ಅಡಿದಂತೆ 'ಕೇವಲ ಶೀಘ್ರ ಲಿಪಿಕಾರರಲ್ಲ ಅದರ ಕರ್ತವ್ಯದಕ್ಷರೂ ಆಗಿರುವ' ಪರಶುರಾಮರೂ ದುಃಭಾಷಿ ಪ್ರೊ. ನಿರ್ಮಲ ಬೋಸರೂ ಮಹಾತ್ಮರನ್ನು ಹಿಂಬಾಲಿಸುವರು.

ನೌಖಾಲಿ ಜಿಲ್ಹೆಯಲ್ಲಿ ನೂರಕ್ಕೆ ೮೦ ರಷ್ಟು ಜನ ಮುಸ್ಲಿಂರಿದ್ದಾರೆ. ಮಹಾತ್ಮರು ಪ್ರಾಮುಖ್ಯವಾಗಿ ಇವರನ್ನೇ ಕಂಡು ಮಾತಾಡಲಿರುವರು ಆದ್ದರಿಂದ ಗಾಂಧೀಜಿಯವರು ತಮ್ಮೊಡನೆ ಹುನಾರನೇಬ ಮುಸ್ಲಿಂ ಸದ್ಗೃಹಸ್ಥನನ್ನು ಕರೆದುಕೊಂಡು ಹೋಗುವರು. ಹುನಾರನು ಮಹಾತ್ಮರೊಡನೆ ಸಂಚರಿಸಲು ತಾನಾಗಿಯೇ ಒಪ್ಪಿದ್ದಾನೆ.

### ಕಠಿಣಯಾತ್ರೆ

ನಡುಗಿಸುವ ಚಳಿ, ಅಂಕಡೊಂಕಾದ ಸೀಳುದಾರಿ, ಅಡಕೆ-ತೆಂಗಿನ ದಟ್ಟವಾದ ಬನಗಳು, ಕಂಗೆಡಿಸುವ ಬಿದುರಿನ ಸಂಕಗಳು ಇವನ್ನೆಲ್ಲ ಎದುರಿಸಿ ಮಹಾತ್ಮರು ಸಂಚಾರ ಮಾಡಬೇಕಾಗಿದೆ.

"ಶ್ರೀ ಶಂಕರಾಚಾರ್ಯರಂತೆ ಮಹಾತ್ಮರೂ ಈ ಎಲ್ಲ ತೊಂದರೆಗಳನ್ನು ಎದುರಿಸುವರು. ಜನಾಂಗ ಜನಾಂಗಗಳ ಮಾನವರಲ್ಲಿ ನಿರ್ಮಿತವಾದ ಪ್ರತಿಬಂಧಗಳನ್ನು ಮಹಾತ್ಮರು ನಷ್ಟವಾಗಿಸುವರು. ಭಾರತದ ಭವಿತವ್ಯಕ್ಕೆ ಕಲಂಕ ತಂದಿರುವ ಈಗಿನ ಜಾತಿಗಳಲ್ಲಿಯ ಪರಸ್ಪರ ದುಸ್ಸಂಘವನ್ನು ಮಹಾತ್ಮರು ನೀಗಿಸುವರು. ಅವರು ಉಭಯ ಪಂಗಡಗಳ ಮನೋರಚನೆಯನ್ನು ಸಾಧಿಸಿ ಅವುಗಳಲ್ಲಿ ಸೌಹಾರ್ದವನ್ನುಂಟುಮಾಡುವರು. ಇದರ ಪರಿಣಾಮವು ಭಾರತದ ಮೇಲಷ್ಟೇ ಆಗದೆ ಜಗತ್ತಿನ ಮೇಲೆ ಆಗುವದು. ಇದೊಂದು ದಿವ್ಯ ಸಂಚಾರಕ್ಕಾಗಿ ಗಾಂಧೀಜಿಯವರು ಸಿದ್ಧರಾಗಿ ನಿಂತಿರುವಾಗ ಅವರ ಭಕ್ತರು ಕಳವಳದಿಂದ ಅವರ ದರ್ಶನ ಪಡೆದು, ಕಣ್ಣೀರುಗರೆಯುತ್ತ ಹಿಂತಿರುಗುತ್ತಿದ್ದಾರೆ. ಮಹಾತ್ಮರು ದೃಢನಿರ್ಧಾರರು. ಮಹಾತ್ಮರು ತಮ್ಮ ಎಂಥ ಭಕ್ತನನ್ನೂ ಸಂಚಾರದಲ್ಲಿ ಸಂಗಡ ಕರೆದುಕೊಂಡು ಹೋಗುವದಿಲ್ಲ. ಅವರನ್ನು ಅನುಸರಿಸಲೆಂದು ಇಲ್ಲಿಗೆ ಬಂದ ಜನ ನಿರಾಶೆಯಿಂದ ಹಿಂತಿರುಗುತ್ತದೆ. ಡಿಸೆಂಬರ ೨೦ ನೇ ತಾರೀಖಿನಿಂದ ಮಹಾತ್ಮರನ್ನು ಕಾಣದಿದ್ದ ಶ್ರೀಮತಿ ಅವಾ ಗಾಂಧಿಯವರು ಒಂದು ರಾತ್ರಿ ಇಲ್ಲಿ ಉಳಿಯಬೇಕೆಂದು ಬಂದಿದ್ದರು. ಆದರೆ ಮಹಾತ್ಮರ ಆದೇಶದಂತೆ ಅವರೂ ಖಾಜಿರಖಿಲಕ್ಕೆ ಕೂಡಲೆ ಹಿಂತಿರುಗಬೇಕಾಯಿತು. ಮಹಾತ್ಮರು ತಮ್ಮ ಸಂಗಡ ಗೀತಾ. ಕುರಾಣ, ಬಾಯಬಲಗಳನ್ನು ಒಯ್ಯುವರು," ಎಂದು ಅವರ ಆಶ್ರಮವಾಸಿಯೊಬ್ಬನು ಹೇಳಿದನು.

ಸಂಚಾರವು ಪ್ರತಿದಿನ ಮುಂಜಾನೆ ಪ್ರಾರಂಭವಾಗುವದು. ತಂಡವೊಂದು ಮುಂಚಿತವಾಗಿ ಹೋಗಿ ಗಾಂಧೀಜಿಯವರು ಮಧ್ಯಾಹ್ನ ಉಳಿದುಕೊಳ್ಳುವ ಹಳ್ಳಿಯಲ್ಲಿ ಎಲ್ಲ ವ್ಯವಸ್ಥೆಯನ್ನಿಡುವದು. ಅಲ್ಲಿ ಮಹಾತ್ಮರ ಊಟವಾದನಂತರ ಪುನಃ ಸಾಯಂಪ್ರಾರ್ಥನೆಯ ವರೆಗೆ ಅವರ ಸಂಚಾರ ನಡೆಯುವದು. ಸಾಯಂಪ್ರಾರ್ಥನೆ ನಡೆಯುವ ಗ್ರಾಮದಲ್ಲಿಯೆ ಮಹಾತ್ಮರು ಹಳ್ಳಿಗಳಲ್ಲಿ ಸಂಚರಿಸಿ ಹಳ್ಳಿಗರ ಪ್ರತಿಕ್ರಿಯೆಗಳನ್ನು ಅರಿತುಕೊಳ್ಳುವರು. ಮಹಾತ್ಮರ ಆರೋಗ್ಯವು ಸುಗ್ಗ ದಿದ್ದರೆ ಅವರ ಸಂಚಾರ ದೀರ್ಘಕಾಲ ನಡೆಯಬಹುದು.

### ಸ್ವಾವಲಂಬನವೇ ರಾಮಬಾಣ

ನಿರಾಶ್ರಿತರು ತಮ್ಮ ಹಳ್ಳಿಗಳಿಗೆ ಹಿಂತಿರುಗಬೇಕಾದರೆ ದೇವರನ್ನೂ ತಮ್ಮ ಜೀವನಸಾಮರ್ಥ್ಯವನ್ನೂ ನಂಬಿ ಹಿಂತಿರುಗಲಿ. ಸದಾ ಸಹಾಯಪಡೆಯುವದಕ್ಕಾಗಿ ಪರಿಹಾರ ಸಂಸ್ಥೆಗಳ ಮೋರೆ ನೋಡಬೇಡಿರಿ. ತೊಂದರೆ ಸಹಿಸಬೇಕಾಗಿ ಬಂದರೂ ನೀವು ನಿಮ್ಮ ಹಳ್ಳಿಗಳಿಗೆ ಹಿಂತಿರುಗಿರಿ ಎಂದು ಮಹಾತ್ಮರು ಒಂದು ಸಾಯಂಪ್ರಾರ್ಥನೆಯ ಸಭೆಯಲ್ಲಿ ಹೇಳಿದರು. ಪ್ರಾರ್ಥನೆಯು ಪ್ರಾರಂಭವಾಗುವ ಪೂರ್ವದಲ್ಲಿ ನೆರೆಹಳ್ಳಿಯ ಸಂಕೀರ್ತನ ಮಂಡಳವೊಂದು ಪ್ರಾರ್ಥನೆಗೆ ಬಂದಿತ್ತು. ಅನೇಕ ಸ್ತ್ರೀಯರೂ ದೂರದ ಹಳ್ಳಿಗಳಿಂದ ಮಹಾತ್ಮರ ದರ್ಶನಕ್ಕಾಗಿ ಬಂದಿದ್ದರು.

ಕಳೆದ ಎರಡು ದಿನ ಇಲ್ಲಿದ್ದ ಶ್ರೀಮತಿ ಸುಚೇತಾ ಕೃಪಲಾನಿಯವರು ಇಂದು ಪರಿಹಾರ ಕಾರ್ಯ ನಡೆಸಲು ಒಳ ಹಳ್ಳಿಗಳಿಗೆ ತೆರಳಿದರು. ಈ ವಾರದ ಕೊನೆಗೆ ಅವರು ಇಲ್ಲಿಗೆ ತಿರುಗಿ ಬರುವರು.

ಮಹಾತ್ಮರು ೨೨ನೇ ತಾರೀಖಿನ ದಿನ ಗೀತಾ ಪಠಣದೊಂದಿಗೆ ಕಸ್ತೂರಬಾ ದಿನವನ್ನಾಚರಿಸಿದರು.

## ರಾಷ್ಟ್ರೀಕರಣ

ಮಂತ್ರಿಮಂಡಲಗಳ ಕೈಯಲ್ಲಿ ಅಲ್ಪಸ್ವಲ್ಪ ಅಧಿಕಾರ ಬಂದಂದಿನಿಂದ ಎಷ್ಟೋ ಉದ್ಯೋಗ ಹಾಗೂ ಸರ್ವೀಸಗಳ ರಾಷ್ಟ್ರೀಕರಣಮಾಡುವ ಮಾತುಗಳು ಬಹಳವಾಗಿ ನಡೆದಿವೆ. ರಾಷ್ಟ್ರೀಕರಣ ಬಗ್ಗೆ ನಡೆದ ಚರ್ಚೆಯನ್ನು ನೋಡಿದರೆ ರಾಷ್ಟ್ರೀಕರಣದ ನಿಜವಾದ ಅಂತಿಮ ಗುರಿಯ ಉದ್ದೇಶದ ಬಗ್ಗೆ ಸ್ಪಷ್ಟವಾದ ಕಲ್ಪನೆ ಪುರಸ್ಕರ್ತರಿಗೆ ಇಲ್ಲವೆಂದೇ ಹೇಳಬೇಕಾಗುವದು. ರಾಷ್ಟ್ರೀಕರಣದ ಬಗ್ಗೆ ಕೆಲವು ಮೂಲಭೂತ ತತ್ವಗಳನ್ನು ಇಲ್ಲಿ ಕೊಡಲಾಗಿದೆ.

ರಾಷ್ಟ್ರೀಕರಣ ಈ ಶಬ್ದದಿಂದ ನಿಜವಾದ ರಾಜಕೀಯ ಅಧಿಕಾರವು ಜನತೆಗೇ ಸೇರಿದ್ದು ಎಂದು ಗೃಹೀತ ಹಿಡಿದು ಸಾಗಬೇಕಾಗುವದು. ಎಲ್ಲಕ್ಕೂ ಮೊದಲು ನಮ್ಮ ಆಡಳಿತೆಯನ್ನು ಸಾಗಿಸುವ ಅನುಭವಪೂರ್ಣ ಜ್ಞಾನವಿರಬೇಕಾದುದು ಅಗತ್ಯ. ಈ ಅನುಭವವು ಹಳ್ಳಿಗರು ತಮ್ಮ ಗ್ರಾಮ ಪಂಚಾಯತಿಗಳನ್ನು ಸಂಘಟಿತ ರೀತಿಯಲ್ಲಿ ನಡಸಿಕೊಂಡು ಬರುವದರಿಂದ ಹಳ್ಳಿಗರಿಗೆ ದೊರೆಯುವದು.

ಇಂಥ ಅನುಭವಪಡೆದ ಹಳ್ಳಿಗರೇ ಜಿಲ್ಹೆಯ ಆಡಳಿತಾಧಿಕಾರ ವಹಿಸಬೇಕು. ಅವರಲ್ಲಿಯೇ ಹೆಚ್ಚು ಕುಶಲರಾದವರು ಪ್ರಾಂತಿಕ ಶಾಸನಸಭೆ ಸಾರ್ವಜನಿಕ ಸೇವೆಗಾಗಿ ಮುಂದೆ ಬರಬೇಕು ಈ ರೀತಿಯಲ್ಲಿ ಪ್ರಾಂತಿಕ ಆಡಳಿತೆಯ ತಳವು ಸುಸಂಘಟಿತ ಗ್ರಾಮಪಂಚಾಯತಿ, ಹಾಗೂ ಆಡಳಿತೆಗಾರರು ಹಳ್ಳಿಗಳ ಸಂಪೂರ್ಣ ಜೀವನದ ಅನುಭವಪಡೆದವರು, ಇದ್ದುದಾದರೆ ಇಂಥ ಪ್ರಾಂತಿಕ ಸರಕಾರ, ಕೇಂದ್ರಸರಕಾರವು ಹಳ್ಳಿಗರ ಹಿತಕ್ಕಾಗಿ ಕಾರ್ಯತತ್ಪರವಾಗುವಂತೆ ಕೇಂದ್ರ ಸರಕಾರದಮೇಲೆ ಒಂದು ರೀತಿಯ ನಿಯಂತ್ರಣ ನಡೆಸಬಹುದು.

ರಾಷ್ಟ್ರದ ಸರಕಾರವು ಈ ರೀತಿಯಿಂದ ಅನುಭವಪಡೆದ ಸುಶಿಕ್ಷಿತ ದೇಶಸೇವಕರ ಕೈಯಲ್ಲಿದ್ದರೆ, ಆಗ ಅಂಥವರು ಲಕ್ಷಾಂತರ ಜನರ ಹಿತಸಂಬಂಧಗಳನ್ನೂ ಒಳ್ಳೇ ಆಸ್ಥೆಯಿಂದ ನೋಡುವರೆಂಬ ವಿಶ್ವಾಸವು ಜನತೆಯಲ್ಲಿ ಮೂಡುವದು. ಆಗ ನಾವು 'ರಾಷ್ಟ್ರೀಯ ಸರಕಾರ' 'ರಾಷ್ಟ್ರೀಕರಣ'ವೆಂದು ಹೇಳುವದೂ, ರಾಷ್ಟ್ರೀಕರಣದಿಂದ ಕೋಟ್ಯಂತರ ಜನರ ಕಲ್ಯಾಣದ ಯೋಚನೆ ಮಾಡುವದೂ ಸರಿಯಾಗುವದು. ಇಂಥ ಹಳ್ಳಿಗಳೇ ಆಧಾರವಾಗಿರುವ ನಿಯಂತ್ರಿತ ಕೇಂದ್ರಸರಕಾರವು ಅಸ್ತಿತ್ವದಲ್ಲಿರದಾಗ 'ರಾಷ್ಟ್ರೀಕರಣ' ನೆಂದರೆ ಅದೊಂದು ಶ್ರೀಮಂತರಿಗೆ ಬಡವರನ್ನು ಸುಲಿಯಲು ಸಾಧನ ಮಾರ್ಗವೆಂದು ಹೇಳಬಹುದು. ಉದಾಹರಣಾರ್ಥ ಇತ್ತೀಚೆಗೆ ಆಕಾಶ ಮಾರ್ಗಗಳ ರಾಷ್ಟ್ರೀಕರಣದ ಬಗ್ಗೆ ಬಹಳ ಚರ್ಚೆ ನಡೆಯಿತು. ಈ ಆಕಾಶ ಮಾರ್ಗಗಳು ಸದ್ಯಕ್ಕಂತೂ ಹಳ್ಳಿಗರಿಗೆ ಏನೂ ಉಪಯೋಗವಿಲ್ಲ. ಹಳ್ಳಿಗರಿಗೆ ಅವು ಬೇಕಾಗಿಲ್ಲ. ಅವರು ಅವುಗಳ ಉಪಯೋಗ ಮಾಡುವದೂ ಇಲ್ಲ. ಅದ್ದರಿಂದ ಸದ್ಯಕ್ಕೆ ಅವುಗಳು ಶ್ರೀಮಂತರ ಒಡೆತನದಲ್ಲಿರುವವು. ಅವುಗಳ ಉಪಯೋಗವನ್ನಾದರೂ ಶ್ರೀಮಂತರ ವರ್ಗದವರೇ ಮಾಡುತ್ತಿರುವರು. ಅದುದರಿಂದ ಆ ಆಕಾಶಮಾರ್ಗಗಳ ಸರಕಾರಿ ನಿಯಂತ್ರಣವೆಂದರೆ ಸರಕಾರದವರು ಶ್ರೀಮಂತರ ಸಲುವಾಗಿ ಈ ಮಾರ್ಗಗಳು ಅನುಕೂಲವಾಗುವಂತೆ ಹಣ, ಹಾಗೂ ವಿಚಾರ ವೆಚ್ಚ ಮಾಡಬೇಕು. ಸರಕಾರವು ಹಣ ವೆಚ್ಚಮಾಡಲು ಸಿದ್ಧವಾದ ಕೂಡಲೇ ಮತ್ತೆ ಕೆಲವು ಶ್ರೀಮಂತರು ಸರಕಾರಕ್ಕೆ ಸಹಾಯಕ್ಕಾಗಿ ಓಡಿಬರುವರು. ಆಕಾಶಮಾರ್ಗ ರಾಷ್ಟ್ರೀಕರಣವಾದೊಡನೆ, ವಿಮಾನ ತಳದವರೆಗೆ ಲೈನು ಮಾರ್ಗ ಹಾಕಿಸುವದು ನೊದಲಾದ ಕಾರ್ಯಗಳನ್ನು ಶ್ರೀಮಂತ ವರ್ಗದವರು ಸರಕಾರದಿಂದ ಗುತ್ತಿಗೆ ಹಿಡಿದು ಸರಕಾರದ ನಿಧಿಯನ್ನು ಸುಲಿಯಹತ್ತುವರು. ಸರಕಾರದವರ ವಶಕ್ಕೆ ಸದ್ಯಕ್ಕೆ ಇರುವ ನಿಧಿಯು ಬಡಜನರ ಕಲ್ಯಾಣದ ಸಲುವಾಗಿ ವೆಚ್ಚಮಾಡಲು ಇದೆ. ಈ ನಿಧಿಯಿಂದ ಶ್ರೀಮಂತರಿಗಾಗಿ ಆಕಾಶಮಾರ್ಗ ಸೌಕರ್ಯಗಳನ್ನು ಒದಗಿಸಲು ಹಣ ವೆಚ್ಚಮಾಡುವದು ಸರಿಯಾಗಲಾರದು. ಕೆಲವು ಶ್ರೀಮಂತರು ಇಂಥ 'ಸರ್ವೀಸ' ನಡೆಸಿ ಇನ್ನುಳಿದ ಕೆಲವು ಶ್ರೀಮಂತರಿಂದ ಹಣ ಸೆಳೆದುಕೊಳ್ಳುತ್ತಿದ್ದರೆ ಅದು ಖಾಸಗಿ ಕಂಪನಿಗಳ ಕಾರ್ಯ. ಅದು ಕೆಲ ದಿನ ಸಾಗಲೊಲ್ಲದೇಕೆ. ಹಳ್ಳಿಗಳನ್ನೇ ಆಧಾರವಾಗಿಟ್ಟುಕೊಂಡ ರಾಷ್ಟ್ರೀಯ ಸರಕಾರ ಸ್ಥಾಪನೆಯಾದ ಮೇಲೆ ಇಂಥ ಸರ್ವೀಸಗಳನ್ನೂ ರಾಷ್ಟ್ರೀಕರಣ ಮಾಡುವ ಬಗ್ಗೆ ವಿಚಾರ ಮಾಡಲು ಬೇಕಾದಷ್ಟು ಸಮಯ ದೊರೆಯುವದು.

ಜೆ. ಸಿ. ಕುಮಾರಪ್ಪಾ



# ಕ ರ್ನಾ ಟ ಕ

### ಧಾರವಾಡ

ಹುಬ್ಬಳ್ಳಿಯ ಪ್ರಸಿದ್ಧ ಅರಳೆ ವ್ಯಾಪಾರಿಗಳಾದ ಶ್ರೀಸುಮಿತ್ರರಾವ ಶಿರೂರ ಅವರು ದಿನಾಂಕ ೨೩ ಮುಂಜಾನೆ ಕರಳು ಬೇನೆಯಿಂದ ತಮ್ಮ ೩೮ ನೇ ವೆಯಸ್ಸಿನಲ್ಲಿ ನಿಧನ ಹೊಂದಿದ್ದರಿಂದ ಎಲ್ಲ ಅರಿವೆ ಅಂಗಡಿಗಳು ದುಃಖ ಪ್ರದರ್ಶನಾರ್ಥ ಮುಚ್ಚಿದ್ದವು.

ಹುಬ್ಬಳ್ಳಿ ಗರ್ಲ್ಸ ಇಂಗ್ಲೀಷ ಸ್ಕೂಲಿನಲ್ಲಿ ವಾರ್ಷಿಕ ದಿನಾಚರಣೆಯು ಶ್ರೀಮತಿ ಸುಮತಿಯಿ ನಾಡಕರ್ಣಿಯವರ ಅಧ್ಯಕ್ಷತೆಯಲ್ಲಿ ಸಾಂಗವಾಯಿತು. ವಿದ್ಯಾರ್ಥಿನಿಯರ ಆಟ ಪಾಟಗಳನ್ನು ನೋಡಿ ಅಧ್ಯಕ್ಷರು ಸಂತೋಷ ಪ್ರದರ್ಶಿಸಿ ೨೦೦ ರೂ. ಕಾಣಿಕೆಯು ವಾಗ್ದಾನವಿತ್ತರು

ಮುಂಬಯಿ ಸರಕಾರದ ಮೇಲೆ ಹುಬ್ಬಳ್ಳಿ ಇಲೆಕ್ಟ್ರಿ ಸಿಟಿ ಕಂಪನಿಯವರು ಹೂಡಿದ ದಾವೆಯಲ್ಲಿ ಮುಖ್ಯ ನ್ಯಾಯಾಧೀಶರಿಗೂ ಉಳಿದ ಇಬ್ಬರು ನ್ಯಾಯಾಧೀಶರಿಗೂ ಭಿನ್ನಾಭಿಪ್ರಾಯವಾಗಿದ್ದರಿಂದ ಕಂಪನಿಯವರು ಪ್ರಿವ್ಹಿ. ಕೌನ್ಸಿಲಿಗೆ ಹೋಗಲಿದ್ದು ಅದಕ್ಕೆ ಹಾಯಕೋರ್ಟಿನ ಅಪ್ಪಣೆ ದೊರೆತಿದೆ.

ಹುಬ್ಬಳ್ಳಿ ತಾಲೂಕ ಕಾಂಗ್ರೆಸ ಕಮೀಟಿಗೆ ಶ್ರೀ ಮಹಾದೇವಪ್ಪ ವಾಯಿಚಳರು ಅಧ್ಯಕ್ಷರಾಗಿಯೂ ಶ್ರೀ ಶಂಭುರಾವ ಜೋಶಿ ವಕೀಲರ. ಉಪಾಧ್ಯಕ್ಷರಾಗಿಯೂ ಶ್ರೀ ನಾಗೇಶ ದೇಸಾಯಿ ಅವರು ಕಾರ್ಯದರ್ಶಿಗಳಾಗಿಯೂ ಆರಿಸಲ್ಪಟ್ಟಿದ್ದಾರೆ.

ಪುನರ್ರಚನೆ ಮಂತ್ರಿಗಳಾದ ಶ್ರೀ ಎಲ್ ಎಂ ಪಾಟೀಲರು ಜನೇವರಿ ಮೊದಲನೇ ವಾರದಲ್ಲಿ ಈ ಜಿಲ್ಹೆಗೆ ಬರಲಿದ್ದು ಅವರ ಮುಂದೆ ಇಡಲು ಜಿಲ್ಹೆಯ ವತಿಯಿಂದ ಒಂದು ಯೋಜನೆ ತಯಾರ ಮಾಡಲು ಜಿಲ್ಹಾ ಕಾಂಗ್ರೆಸ ಕಮೀಟಿಯವರು ಶ್ರೀಗಳಾದ ಕೆ ವೆಂಕಟರಾಮಯ್ಯ, ಜಿ ಕೆ ವಾಳವೇಕರ, ವಿ. ಜಿ. ಕುಂಬಿ ಹಾಗು ಬಿ. ಎಚ್ ಪಾಟೀಲ ಅವರ ಒಂದು ಮಂಡಳವನ್ನು ನಿಯಮಿಸಿದ್ದಾರೆ.

ಜಿಲ್ಹಾ ಲೋಕಲ್ ಬೋರ್ಡಿನ ಹಾನಗಲ್ಲ ತಾಲೂಕ ಚುನಾವಣೆಯು ಫೆಬ್ರುವರಿಯಲ್ಲಿ ಜರುಗಲಿದ್ದು ೩ ಸ್ಥಳಗಳಿಗೆ ಶ್ರೀಯುತರಾದ ೧ ಶ್ರೀನಿವಾಸ ಚಿನ್ನಮುಳಗುಂದ ೨ ಚನಬಸಪ್ಪ ಪಾವಲಿ ೩ ರುದ್ರಗೌಡ ಪಾಟೀಲ ೪ ಎಸ್. ಬಿ. ಕೆಂಡಾಮಠ ೫ ಮಾರ್ತಾಂಡ ಕುಲಕರ್ಣಿ ೬ ಟಿ ಎಸ್. ನಾಯಕ ೭ ನಾಗಪ್ಪ ಪೂಜಾರ ೮ ಬಿ. ಆರ್. ಪಾಟೀಲ ಅವರು ಅರ್ಜಿ ಕೊಟ್ಟಿದ್ದಾರೆ ಇವರಲ್ಲಿ ಮೊದಲಿನ ಮೂವರು ಕಾಂಗ್ರೆಸ ಹುರಿಯಾಳುಗಳಿರುವರು.

ಈ ವರ್ಷದ ಮುಟ್ಟಿಗೆ ಮುಗ್ಗ ಭತ್ತವನ್ನು ಸಾಧಾರಣ ಭತ್ತದ ಧಾರಣೆಯಿಂದಲೇ ಕೊಳ್ಳಲು ನಿಶ್ಚಯಿಸಿದೆಂದು ಕಲೆಕ್ಟರರು ಪ್ರಸಿದ್ಧಿಸುತ್ತಾರೆ

ಅಖಿಲ ಕರ್ನಾಟಕ ಏಕೀಕರಣ ಸಂಘಕ್ಕೆ ಕರ್ನಾಟಕ ಏಕೀಕರಣ ಸಂಬಂಧದ ಕಾರ್ಯದ ಸಲುವಾಗಿ ಹುಬ್ಬಳ್ಳಿಯ ಕೆಲವು ಮಹನೀಯರು ೩೫೧ ರೂ ಕೂಡಿಸಿ ಕೊಟ್ಟಿರುವರು.

ಕಳ್ಳಪೇಟಿಯಿಂದ ನೂಲು ಸಾಗಿಸುತ್ತಿದ್ದ ಆರೋಪದಿಂದ ಹೊಳೆ ಆಲೂರಲ್ಲಿ ನಾರಾಯಣ ಕಠಾರಿ ಅವರ ಬಂಧನವಾಗಿದೆ.

ಗದಗದಲ್ಲಿ ಜನೇವರಿ ೩ ನೇ ವಾರದಲ್ಲಿ ಶ್ರೀಗಳಾದ ಗೋವಿಂದ ರಡ್ಡಿ ಮಾಸ್ತಿ, ರಾಮಣ್ಣ ಬೆಟಗೇರಿ, ವೀರಭದ್ರಪ್ಪ ಎಲಿಗಾರ ಮೊದಲಾದವರು ಜಿಲ್ಹಾ ರೈತ ಕಾರ್ಯಕರ್ತರ ಸಭೆ ಕರೆದಿದ್ದಾರೆ.

ಜಿಲ್ಹಾ ಪೋಸ್ಟಮನ್ ಹಾಗು ಕೆಳವರ್ಗ ನೌಕರ ಸಂಘದ ವಾರ್ಷಿಕ ಸಭೆ ದಿನಾಂಕ ೨೧ ರಲ್ಲಿ ಜರುಗಿ ಶ್ರೀಗಳಾದ ವಾಯ ಡಿ ಪಯ್ಯದರು ಅಧ್ಯಕ್ಷರು, ಡಾ. ನಾಡಕರ್ಣಿಯವರು ಉಪಾಧ್ಯಕ್ಷರು, ಕೆ. ಎಲ್. ರಜಪೂತ ಹಾಗು ಆರ್ ಡಿ ಏಕಬೋಟೆಯವರು ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟರು.

ಗದಗ ತಾಲೂಕಿನ ಕಾರ್ಯಕರ್ತರು ಸಭೆ ಸೇರಿ ಕಟ್ಟಿಗೆ ಸೀದಾದಲ್ಲಿಯ ಅವ್ಯವಸ್ಥೆ ದೂರ ಮಾಡಬೇಕು, ನೇಕಾರರಿಗೆ ಸಾಕಷ್ಟು ನೂಲು ಪೂರೈಸಬೇಕು, ಬೆಳೆಗಳು ಅತಿ ವೃಷ್ಟಿಯಿಂದ ನಾಶವಾಗಿದ್ದರ ಕಡೆಗೆ ಅಧಿಕಾರಿಗಳು ಲಕ್ಷಕೊಡಬೇಕು ಮೊದಲಾಗಿ ಕೇಳಿಕೊಂಡಿರುವರು.

ಹೊಸರಿತ್ತಿ ಶ್ರೀ ಗುದ್ಲಿ ಸ್ವಾಮಿಗಳ ಜಾತ್ರೆಯು ಈ ಸಲ ೩—೧—೪೭ ರಿಂದ ೩-೨-೪೭ ರ ವರೆಗೆ ನಡೆಯುವದು.

ಗದಗಿನಲ್ಲಿ ಜನೇವರಿ ೮-೯ ದಿನಾಂಕಗಳಲ್ಲಿ ನಡೆಯುವ ೧೫ ನೇ ನಿಖಿಲ ಕರ್ನಾಟಕ ಆಯುರ್ವೇದ ಸಮ್ಮೇಲನಕ್ಕೆ ಶ್ರೀಮತಿ ಸುಮತಿಬಾಯಿ ತಾರಾನಾಥ ಅವರು ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದು ಮುಂಬಯಿ ಸರಕಾರದ ಆರೋಗ್ಯ ಖಾತೆಮಂತ್ರಿಗಳಾದ ಡಾ. ಗಿಲ್ಡರರು ಸಮ್ಮೇಲನದ ಉದ್ಘಾಟನ ಮಾಡುವರು. ಪ್ರದರ್ಶನ ಹಾಗು ಚಿಕಿತ್ಸಾ ವಿಭಾಗಗಳ ಪ್ರಾರಂಭೋತ್ಸವವು ಅನುಕ್ರಮವಾಗಿ ಮದ್ರಾಸ ಸರಕಾರದ ಆರೋಗ್ಯ ಮಂತ್ರಿಗಳಾದ ಶ್ರೀಮತಿ ರುಕ್ಮಿಣಿ ಲಕ್ಷ್ಮೀಪತಿ ಹಾಗು ಮುಂಬಯಿ ದೇಶಿ ವೈದ್ಯಕ ಬೋರ್ಡಿನ ಅಧ್ಯಕ್ಷರಾದ ಡಾ ಲಾಗು ಅವರಿಂದ ನಡೆಯುವದು.

ಧಾರವಾಡ ಅರಣ್ಯ ಕಚೇರಿಯಲ್ಲಿಯ ಹೆಡ್ ಕ್ಲಾರ್ಕರಾದ ಪ್ರಲ್ಹಾದ ವೆಂಕಟೇಶ ನವಲಗುಂದ ಅವರನ್ನು ಪೋಲೀಸ ಅಧಿಕಾರಿಗಳು ೪೨೦೦ ರೂ. ಎತ್ತಿ ಹಾಕಿದ ಆರೋಪದಿಂದ ಬಂಧಿಸಿ ಜಾಮೀನ ಮೇಲೆ ಬಿಟ್ಟಿರುವರು.

ಹುಬ್ಬಳ್ಳಿ ಮಾಧ್ಯಮಿಕ ಶಿಕ್ಷಕ ಸಂಘದವರು ಜಾನೇವರಿ ಕೊನೆಯ ವಾರದಲ್ಲಿ ಹುಬ್ಬಳ್ಳಿಯಲ್ಲಿ ಕರ್ನಾಟಕ ಮಾಧ್ಯಮಿಕ ಶಿಕ್ಷಕರ ಸಮ್ಮೇಲನ ಕೂಡಿಸಲು ಯೋಜಿಸಿದ್ದಾರೆ.

ಮಲದಿಂದ ಗೊಬ್ಬರವನ್ನು ತಯಾರಿಸುವ ಕುರಿತು ಸಂಗೂರಿನ ಶ್ರೀ ಕರಿಯಪ್ಪ ಎರೆಸೀಮೆಯವರು ಸಿದ್ಧಪಡಿಸಿದ ಯೋಜನೆಗೆ ಮುಂಬಯಿ ಸರಕಾರದವರು ೨೯೦೦ ರೂ. ಮಂಜೂರ ಮಾಡಿದ್ದಾರೆ. ಎರೆಸೀಮೆಯವರು ಸಂಗೂರಿನಲ್ಲಿ ಈ ಯೋಜನೆ ಕೈಕೊಳ್ಳುವರು.

ಜಠಾರ ಫುಟಬಾಲ ಪಂದ್ಯಾಟವು ಜನೇವರಿ ೯ ಕ್ಕೆ ಧಾರವಾಡದಲ್ಲಿ ಆರಂಭವಾಗುವದು. ಕರ್ನಾಟಕದ ಎಲ್ಲ ಜಿಲ್ಹೆಗಳವರು ಈ ಪಂದ್ಯಾಟದಲ್ಲಿ ಭಾಗವಹಿಸಬಹುದು. ಪ್ರವೇಶ ಫೀ ೧೦ ರೂಪಾಯಿಯಿದ್ದು ಸೇರುವವರು ಜನೇವರಿ ೪ ರೊಳಗಾಗಿ ಚೇರಮನರಾದ ಪ್ರೊ. ಆರ್. ವಿ. ಜಹಾಗೀರದಾರರಿಗೆ ಬರೆದುಕೊಳ್ಳಬೇಕು.

### ಬೆಳಗಾವಿ

ಪತ್ರಿಕೋದ್ಯಮ ಶಿಕ್ಷಣಪಡೆಯಲು ಅಮೇರಿಕೆಗೆ ಹೋಗಲಿದ್ದ ಶ್ರೀ ನಾಡಿಗ ಕೃಷ್ಣಮೂರ್ತಿಯವರಿಗೆ ಬೆಳಗಾವಿಯ ಕನ್ನಡ ತರುಣರು ಸನ್ಮಾನ ಸಮಾರಂಭ ಏರ್ಪಡಿಸಿ ಅವರಿಗೆ ಯಶಸ್ಸು ಕೋರಿದರು.

ಅಖಿಲ ಕರ್ನಾಟಕ ಮಾಧ್ಯಮಿಕ ಶಾಲೆಗಳ ಮುಖ್ಯಾಧ್ಯಾಪಕರ ಸಮ್ಮೇಲನವು ದಿನಾಂಕ ೨೬ ರಲ್ಲಿ ಬೆಳಗಾವಿಯಲ್ಲಿ ಧಾರವಾಡ ಕರ್ನಾಟಕ ಹಾಯಸ್ಕೂಲಿನ ಪ್ರಿನ್ಸಿಪಾಲರಾದ ಶ್ರೀ ಎಸ್. ಜಿ. ಶೆಣೋಳಿಕರರ ಅಧ್ಯಕ್ಷತೆಯಲ್ಲಿ ಸಾಂಗವಾಯಿತು.

ಗೋವೆಯ ರಾಷ್ಟ್ರೀಯ ಸಭೆಯವರು ಖಾನಾಪುರ ಹತ್ತರ ಸತ್ಯಾಗ್ರಹಿಗಳ ತರಬೇತಿ ಕೇಂದ್ರ ತೆರೆದು ೧೫೦ ಜನರಿಗೆ ಶಿಕ್ಷಣ ಕೊಡಲಿದ್ದಾರೆ. ಶ್ರೀ ಅಣ್ಣಾಸಾಹೇಬ ಸಹಸ್ರಬುದ್ಧೆಯವರ ನೇತೃತ್ವದಲ್ಲಿ ಈ ಶಿಬಿರವು ಸಾಗುವದು.

ಜೇಲ ಸುಧಾರಣೆ ಸಮಿತಿಯ ಮಂಗಲದಾಸ ಪಕ್ವಾಸಾ, ಕರಮರಕರ, ಗಾಡಗೀಳ ಮೊದಲಾದವರು ದಿನಾಂಕ ೨೪ ಕ್ಕೆ ಹಿಂಡಲಗಿ ಸೆರೆಮನೆಗೆ ಭೆಟ್ಟಿ ಕೊಟ್ಟು ಅಲ್ಲಿಯ ಪರಿಸ್ಥಿತಿ ಪರಿಶೀಲಿಸಿದರು. ಮಂಗಲದಾಸ ಹಾಗು ಕರಮರಕರರು ಜಿಲ್ಹಾ ಕಾಂಗ್ರೆಸ ಕಮೀಟಿಯಲ್ಲಿ ಕಾರ್ಯಕರ್ತರನ್ನು ಕಂಡು ಜಾತೀಯ ಪರಿಸ್ಥಿತಿ, ಲಂಚುಗುಳಿತನ ಮೊದಲಾದವುಗಳ ಬಗ್ಗೆ ಚರ್ಚೆ ಮಾಡಿದರು.

ಅರಳೀಕಟ್ಟೆಯಲ್ಲಿ ದಿನಾಂಕ ೨೦ಕ್ಕೆ ರೈತ ಸಭೆ ಜರುಗಿ ಶ್ರೀಗಳಾದ ವಾಲಿ, ಮಂಡಗಿ, ರಾಯನಗೌಡ ಮೊದಲಾದವರ ಭಾಷಣಗಳಾದವು.

### ವಿಜಾಪುರ

ವಿಜಾಪುರದಲ್ಲಿ ಜಿಲ್ಹಾ ರಜಿಸ್ಟರ್ಡ ವೈದ್ಯರ ಸಂಘವು ಸ್ಥಾಪಿತವಾಗಿ ಆಯುರ್ವೇದತೀರ್ಥ ಆದ್ಯ ಅನಂತಾಚಾರ್ಯರು ಅಧ್ಯಕ್ಷರಾಗಿಯೂ ಶ್ರೀ ಗುರುಪಾದಶಾಸ್ತ್ರಿ ಪುರಾಣಿಕ ಅವರು ಕಾರ್ಯದರ್ಶಿಗಳಾಗಿಯೂ ಆರಿಸಲ್ಪಟ್ಟಿದ್ದಾರೆ

ಮುಂಬಯಿ ಸರಕಾರದವರು ಪುನರ್ರಚನೆಯ ಪಂಚವಾರ್ಷಿಕ ಯೋಜನೆಯಲ್ಲಿ ಕೊಲ್ಹಾಪುರ ವಿಜಾಪುರ ನಡುವೆ ಭೀಮಾನದಿ ದಂಡೆಯ ಮೇಲೆ ೧೫೦೦ ಮಹಾರೋಗಿಗಳನ್ನು ಹಿಡಿಸುವ ದೊಡ್ಡದೊಂದು ವಸತಿ ಸ್ಥಾನ ಏರ್ಪಡಿಸಲಿದ್ದಾರೆ.

೮೫ ಚೀಲ ಇದ್ದಲಿಯನ್ನು ಅಪ್ಪಣೆಯಿಲ್ಲದೆ ಬಿಜ್ಜರಿಗೆಯಿಂದ ವಿಜಾಪುರಕ್ಕೆ ತಂದಿದ್ದಕ್ಕೆ ವಿಜಾಪುರ ಜನರಲ್ ಟ್ರಾನ್ಸಪೋರ್ಟ ಕಂಪನಿ ಮ್ಯಾನೇಜರ ಮೊದಲಾದವರ ಮೇಲೆ ಖಟ್ಲೆ ಹಾಕಲಾಗಿದೆ.

ಬದಾಮಿತಾಲೂಕ ಮಣಿನಾಗರದಲ್ಲಿ ಗೌಡರಾದ ಮಲ್ಲನಗೌಡ ಪಾಟೀಲರ ಕೊಲೆಯಾಗಿದ್ದು ಪೋಲೀಸ ಅಧಿಕಾರಿಗಳು ವಿಚಾರಣೆ ನಡೆಸಿರುವರು.

ಮುಧೋಳ ಸಂಸ್ಥಾನಕ್ಕೆ ಹೋಗುತಿದ್ದ ೬ ಚಕ್ಕಡಿ ಜೋಳ ಸಜ್ಜಿಗಳನ್ನು ಬಾಗಲಕೋಟ ಸೂರ್ವೈಕ ಸಬ್ ಇನಸ್ಪೆಕ್ಟರರು ಚಿಕ್ಕ ಅಲಗುಂಡಿ ಹತ್ತರ ಹಿಡಿದು ಜಪ್ತ ಮಾಡಿದ್ದಾರೆ.

ಬಾಗಲಕೋಟ ನಗರಸಭೆಯವರು ಸರಕುಗಳ ಮೇಲಿನ ಜಕಾತಿಯನ್ನು ಸುಮಾರು ೩ ಪಟ್ಟು ಹೆಚ್ಚಿಸಿದ್ದು ಅದಕ್ಕೆ ಸರಕಾರದ ಅನುಮತಿ ಸಿಕ್ಕಿರುವದು.

ಮುದ್ದೇಬಿಹಾಳ ಸ್ಪೆಶಲ್ ಮಾಮಲೆದಾರರಾದ ಶ್ರೀ ಜೋಶಿ ಹಾಗು ಕಾರಕೂನರಾದ ಕುಲಕರ್ಣಿ ಅವರನ್ನು ಲಂಚ ನಿರ್ಮೂಲನ ಶಾಖೆಯ ಶ್ರೀ ಹಿರೇಗೌಡರು ಹಿಡಿದು ಜಾಮೀನದ ಮೇಲೆ ಬಿಟ್ಟಿರುತ್ತಾರೆಂದು ತಿಳಿಯುತ್ತದೆ.

### ಬಳ್ಳಾರಿ

ವಿದ್ಯಾರ್ಥಿ ಕಾಂಗ್ರೆಸ್ಸಿನ ಕಾರ್ಯಸಮಿತಿಯವರು ಫೆಬ್ರುವರಿಯಲ್ಲಿ ಜಿಲ್ಹಾ ವಿದ್ಯಾರ್ಥಿ ಕಾಂಗ್ರೆಸ್ಸನ್ನು ಜರುಗಿಸಬೇಕೆಂದೂ ಆ ಕಾಲಕ್ಕೆ ಜೋಕಿಂ ಅಲ್ವಾ, ಅಶೋಕ ಮೇಥಾ, ಎಸ್ ಎಸ್ ವರದಾಚಾರಿ ಮೊದಲಾದವರನ್ನು ಆಮಂತ್ರಿಸಬೇಕೆಂದೂ ನಿರ್ಣಯಿಸಿದ್ದಾರೆ.

### ಸಂಸ್ಥಾನಗಳು

ಹಾಸನ ವಕೀಲ ಸಂಘದ ವಾರ್ಷಿಕ ಸಭೆಯಲ್ಲಿ ಅಧ್ಯಕ್ಷರು ಘಟನಾ ಸಮಿತಿಗೆ ಲೋಕನಿಯುಕ್ತ ಪ್ರತಿನಿಧಿಗಳನ್ನೆ ಆರಿಸಿ ಕಳಿಸಬೇಕೆಂದು ಬಂದ ಸೂಚನೆಗೆ ಅಪ್ಪಣೆ ಕೊಡದ್ದರಿಂದ ಕೆಲವರು ಸಂಘಕ್ಕೆ ರಾಜೀನಾಮೆ ಕೊಡುವ ವಿಚಾರ ನಡೆಸಿದ್ದಾರೆ.

ಕಟಿಕೋಳ ಹಾಗು ತೊರಗಲ್ಲ ಭಾಗಗಳ ರೈತ ಪರಿಷತ್ತು ಶ್ರೀ ಮಾನವಳ್ಳಿಯವರ ಅಧ್ಯಕ್ಷತೆಯಲ್ಲಿ ಸಾಂಗವಾಯಿತು. ಶ್ರೀ ಕುಂಬಿಯವರು ಪರಿಷತ್ತಿನ ಉದ್ಘಾಟನ ಮಾಡಿದರು.

ಮರಡಿಹಳ್ಳಿಯಲ್ಲಿಯ (ಚಿತ್ರದುರ್ಗ) ಜನರು ಸಭೆ ಸೇರಿ ತಮ್ಮಲ್ಲಿಯ ದೇವಾಲಯಗಳನ್ನು ಹರಿಜನರಿಗೆ ಮುಕ್ತಮಾಡಿ ಹರಿಜನ ಪ್ರವೇಶ ಸಮಾರಂಭ ಜರುಗಿಸಿದರು.

ದಕ್ಷಿಣ ಸಂಸ್ಥಾನಗಳ ಒಕ್ಕೂಟವು ವಿಧಾಯಕ ಕ್ರಾಂತಿ ಮಾರ್ಗದಲ್ಲಿಯ ಒಂದು ಮಹತ್ವದ ಹೆಜ್ಜೆಯಾಗಿರುವದೆಂದು ಶ್ರೀ ಶಂಕರರಾವ ದೇವ ಅವರು ಶ್ರೀ ಶಿಖರೆಯವರಿಗೆ ಬರೆದ ಪತ್ರದಲ್ಲಿ ತಿಳಿಸಿದ್ದಾರೆ.

ಹೈದರಾಬಾದ ಸಂಸ್ಥಾನದವರು ಅಫು ಸೇವನೆಯನ್ನು ಪೂರ್ಣ ಪ್ರತಿಬಂಧಿಸಲು ನಿರ್ಧರಿಸಿದ್ದಾರೆ. ವೈದ್ಯರ ಸೂಚನೆ ಮೇರೆಗೆ ಕೆಲವು ಚಟಗಾರರಿಗೆ ಮಾತ್ರ ಅಪ್ಪಣೆಕೊಡಲಾಗುವದು.

೧ ತಿಂಗಳ ವರೆಗೆ ತುಮಕೂರ ತಾಲೂಕಿನಲ್ಲಿ ಸಭೆ ಮೆರವಣಿಗೆಗಳಿಗೆ ಪ್ರತಿಬಂಧ ಮಾಡಲಾಗಿದೆ.

ಅಡಿಕೆ ತೋಟಗಾರರ ಹಿತರಕ್ಷಣೆಗಾಗಿ ಸಾಗರದಲ್ಲಿ ಜಿಲ್ಹಾ ಅಡಿಕೆ ಸಹಕಾರ ಸಂಘದ ಶಾಖೆಯೊಂದು ಸ್ಥಾಪಿತವಾಗಿರುವದು.

ಉತ್ತರಾದಿ ಮಠದ ಶ್ರೀಪಾದಂಗಳವರು ಒಂದು ಪ್ರಕಟನೆ ಹೊರಡಿಸಿ ವಿದ್ಯಾರ್ಥಿಗಳಿಗೆ ಸ್ವತಂತ್ರ ಪಾಠ ಪ್ರವಚನ ಮಾಡಿಸಿ ಮಧ್ವಸಿದ್ಧಾಂತದ ಅಭಿವೃದ್ಧಿ ಮಾಡುವವರಿಗೆ ಮಠದಿಂದ ಧನಸಹಾಯ ಕೊಡಲಾಗುವದೆಂದು ಪ್ರಸಿದ್ಧಿಸಿದ್ದಾರೆ.

ಮೈಸೂರ ದಿವಾಣರಾದ ಸರ್ ರಾಮಸ್ವಾಮಿ ಮುದಲಿಯಾರರು ಮೈಸೂರ ವಣಿಕ್ ಸಂಘದಲ್ಲಿ ಭಾಷಣ ಮಾಡುತ್ತ ಉದ್ಯೋಗಗಳ ರಾಷ್ಟ್ರೀಕರಣ ಮತ್ತು ಕೇಂದ್ರೀಕರಣಗಳು ಘಾತಕವಾದುವೆಂದು ನಿರ್ದಿಷ್ಟವಾಗಿ ಹೇಳಿದರು.

# ಹಿಂದುಸ್ತಾನ

## ಮುಂಬಯಿ

ಬಡ ಒಕ್ಕಲಿಗರಿಗೆ ಸಾಲಒದಗಿಸಿಕೊಡುವ ಕೆಲಸವನ್ನು ಬ್ಯಾಂಕುಗಳು ಮಾಡಬಹುದಾದ್ದರಿಂದ ಅದರ ಸಲುವಾಗಿ ಪ್ರತ್ಯೇಕ ಯೋಜನೆ ಅನವಶ್ಯವೆಂದು ಮುಂಬಯಿ ಸಹಕಾರ ಬ್ಯಾಂಕುಗಳ ಸಂಘದ ಸಭೆಯಲ್ಲಿ ಗೊತ್ತುವಳಿ ಪಾಸಾಯಿತು.

ಜಳಗಾಂವದ ಆರು ಕಮ್ಯುನಿಸ್ಟ ಕಾರ್ಯಕರ್ತರನ್ನು ಜಿಲ್ಹಾ ಪೋಲೀಸ ಕಾಯಿದೆಯ ೪೬ ನೇ ಕಲಮಿನನ್ವಯ ಎರಡು ವರ್ಷದವರೆಗೆ ಮುಂಬಯಿ ಪ್ರಾಂತದಿಂದ ಗಡಿಪಾರು ಮಾಡಲಾಗಿದೆ.

ಮುಂಬಯಿ ಚೀಫ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರಾದ ಜೆ. ಎಂ. ಬ್ಯಾರಟರ ಮೇಲೆ ಮಾಡಲಾದ ಹಿಂದು ಪಕ್ಷಪಾತದ ಆರೋಪವು ನಿರಾಧಾರವೆಂದು ಹಾಯಕೋರ್ಟು ತೀರ್ಪುಕೊಟ್ಟಿತು. ಅಧಿಕಾರಿಗಳು ಹಾಗೂ ಚೀಫ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರು ಗಲಭೆ ಖಟ್ಲೆಗಳ ಸಲುವಾಗಿ ಹೆಚ್ಚು ಮ್ಯಾಜಿಸ್ಟ್ರೇಟರನ್ನು ನೇಮಿಸಿ ಯಾರಿಗೂ ಅತಿರೇಕ ಕೆಲಸ ಬೀಳದಂತೆ ನೋಡಿಕೊಳ್ಳಬೇಕೆಂದೂ ಅದು ಸೂಚಿಸಿತು.

ಮಲದಿಂದ ಗೊಬ್ಬರವನ್ನು ತಯಾರಿಸುವ ಬಗ್ಗೆ ಶ್ರೀ ಕರಿಯಪ್ಪ ಯರೇಸೀಮೆಯವರು ತಯಾರಿಸಿದ ಯೋಜನೆಗೆ ೨೫೦೦ ರೂಪಾಯಿಗಳನ್ನು ಮುಂಬಯಿ ಸರಕಾರವು ಮಂಜೂರ ಮಾಡಿದೆ.

ಅ. ಭಾ. ವೃತ್ತಪತ್ರ ಸಂಪಾದಕರ ವಿಶೇಷಾಧಿವೇಶನವು, ಅನೇಕ ಸದಸ್ಯರ ಇಚ್ಛೆಯಮೇರೆಗೆ ರದ್ದಾಯಿತು.

ಇದೇವರ್ಷದಿಂದ ನೀರಾವರಿಹೊಲಗಳಲ್ಲಿ ಹುಟ್ಟುವಳಿಯ೧/೪ಮತ್ತುಸಾದಾ ಹೊಲಗಳಲ್ಲಿ೧/೩ ಅಥವಾ ರೈತ ಒಡೆಯರಲ್ಲಿ ಒಪ್ಪಿಗೆ ಯಾದ ಲಾವಣಿ, ಇವು ಗಳಲ್ಲಿ ಯಾವದು ಕಡಿಮೆ ಯಾಗುವದೋ ಅಷ್ಟೇಲಾವಣಿಯನ್ನು ರೈತರಕಡೆಯಿಂದ ವಸೂಲ ಮಾಡಿಕೊಳ್ಳಬೇಕೆಂದು ಸರಕಾರವು ಅಜ್ಞೆ ಹೊರಡಿಸಿದೆ.

ಇಕ್ಬಲ ಎಂಬ ಉರ್ದು ಪತ್ರಿಕೆಯ ಪ್ರಕಾಶಕರೂ ಅದನ್ನು ಮುದ್ರಿಸುತ್ತಿದ್ದ ಮುದ್ರಣಾಲಯದ ಒಡೆಯರೂ ಪ್ರತ್ಯೇಕವಾಗಿ ಮೂರು ಸಾವಿರ ರೂಪಾಯಿ ಜಾಮೀನ ಹಣ ಕೊಡಬೇಕೆಂದು ಮುಂಬಯಿ ಸರಕಾರವು ಆಜ್ಞೆ ವಿಧಿಸಿದೆ.

ಮುಂಬಯಿ ನಗರದ ಅಗ್ರಿಪಾಡಾ, ಬಾಯಖಾಲಾ, ಡೊಂಗ್ರಿ, ಪ್ರಾಯಧೂನಿ, ಫಲ್ಕನರಸ್ತೆ, ಸೀವ್ರಿ ಈ ವಿಭಾಗಗಳಲ್ಲಿ ಆಗಾಗ ತಿವಿತಗಳು ಸಂಭವಿಸುತ್ತಿವೆ.

ಹಿಂದುಸ್ತಾನದಲ್ಲಿ ಹೊಸ ಉದ್ಯೋಗಗಳನ್ನು ಪ್ರಾರಂಭಿಸಲು ಪರದೇಶದ ಸಹಕಾರ ಸಿಕ್ಕುವದೆಂದು ಅ. ಭಾ. ಉದ್ದಿಮೆದಾರರ ಸಂಘದ ಅಧ್ಯಕ್ಷರಾದ ಸರ್ ಎಂ. ವಿಶ್ವೇಶ್ವರಯ್ಯನವರು ಹೇಳಿದರು.

ಮುಂಬಯಿ ನಗರದಲ್ಲಿದ್ದ ೬೩ ವಿಮಾ ಸಂಸ್ಥೆಗಳಲ್ಲಿಯ ೨ ಸಾವಿರಕಾರಕೂನರು ಹೆಚ್ಚಿನ ಸಂಬಳದ ಸಲುವಾಗಿ ಅರ್ಧತಾಸು ಧರಣೀ ಸತ್ಯಾಗ್ರಹ ಹೂಡಿದರು.

ಇಲ್ಲಿಯ ಒಂದು ಮದ್ರಾಸೀ ಭೋಜನಾಲಯದ ಸದಸ್ಯನೊಬ್ಬನು ಅದರ ವ್ಯವಸ್ಥಾಪಕರ ಸೊಕ್ಕಿನ ಆಚರಣೆಯನ್ನು ಪ್ರತಿಭಟಿಸಲು ಅನ್ನ ಸತ್ಯಾಗ್ರಹ ಮಾಡಿದನು. ರವಿವಾರ ದಿವಸ ಬೇರೆ ಸದಸ್ಯರಿಗೆ ವ್ಯವಸ್ಥಾಪಕರು ಊಟ ಬಡಿಸಿದರೂ ಇವನನ್ನು ತಿರುಗಿ ಕಳುಹಿದರಂತೆ.

ಸರಕಾರವು ಬೆಲ್ಲದ ಧಾರಣೆಯನ್ನು ಪುನಃ ನಿಯಂತ್ರಿಸಲು ನಿಶ್ಚಯಿಸಿದ್ದಾರೆ. ಬೆಲ್ಲದ ವ್ಯಾಪಾರಿಗಳು ಸರಕಾರದಿಂದ ನಿಯಂತ್ರಿತವಾದ ಬೆಲೆಗೆ ಮಾತ್ರ ಬೆಲ್ಲ ಮಾರಬೇಕೆಂದು ಠೋಕ ಮತ್ತು ಕಿರುಕಳಬೆಲ್ಲದ ವ್ಯಾಪಾರಿಗಳಿಗೆ ಲಾಯಸನ್ಸ ಕೊಡುವಯೋಜನೆ ಸಿದ್ಧವಾಗಿದೆ.

ಸರದಾರ ಇನಾಮತ ಉಲ್ಲಾ ಖಾನ, ಸರದಾರ ಹಫೀಜುಲ್ಲಾ ಖಾನ, ಸರದಾರ ಹಬೀಬುಲ್ಲಾ ಖಾನ ಎಂಬ ಹಿಂದುಸ್ತಾನದಲ್ಲಿ ಬಂಧನದಲ್ಲಿದ್ದ ಮೂವರು ಅಫಗಾನಿಸ್ತಾನ ಸರದಾರರು ಬ್ರಿಟಿಶ ಸರಕಾರದ ಯಾವ ನಿರ್ಬಂಧಕಾಜ್ಞೆಗಳನ್ನು ತಾವು ಒಪ್ಪುವದಿಲ್ಲವೆಂದೂ ತಾವು ಭಾರತದಲ್ಲಿದ್ದ ಸ್ವತಂತ್ರ ಪರಕೀಯರೆಂದೂ ಸಾರಿ ತಮ್ಮನ್ನು ಪಾರುಮಾಡಬೇಕೆಂದು ಪಂಡಿತ ಜವಾಹರಲಾಲರಿಗೆ ಪತ್ರಬರೆದಿದ್ದಾರೆ.

ಮೂರುವಾರಗಳನಂತರ ಮುಂಬಯಿ ನಗರದ ಕೆಲವೊಂದು ಭಾಗಗಳಲ್ಲಿ ಮತ್ತೆ ಕರ್ಫ್ಯೂ ಆಜ್ಞೆಯನ್ನು ಜಾರೀಮಾಡಲಾಗಿದೆ.

ಪಂಜಾಬ ಪ್ರಾಂತಕ್ಕೆ ಕಳ್ಳಮಾರ್ಗದಿಂದ ಬಂದ ಅಂವೆಯನ್ನೆಲ್ಲ ಅಲ್ಲಿಯ ಪ್ರಾಂತಿಕ ಸರಕಾರವು ಸ್ತಂಭೀಕರಿಸಿದ್ದರಿಂದ ಮುಂಬಯಿಯಲ್ಲಿಯ ಆ ತರಗತಿಯ ಬಟ್ಟೆಯ ಬೆಲೆಯು ಝುರ‍್ರನೆ ಇಳಿದಿರುವದು.

## ಮದ್ರಾಸ

ನೇಕಾರರ ಕೂಲಿ ಹಾಗು ಕೈಮಗ್ಗ ಬಟ್ಟೆಯ ಬೆಲೆ ನಿಯಂತ್ರಿಸಲು ಪ್ರಾಂತಿಕ ಕೈಮಗ್ಗ-ಕೂಲಿಕಾರ ಸಲಹಾ ಮಂಡಳವನ್ನು ರಚಿಸಲಾಗುವದೆಂದು ಮುಖ್ಯ ಮಂತ್ರಿಗಳು ಹೇಳಿದರು.

ಪ್ರತಿಯೊಬ್ಬ ಪ್ರೌಢನಿಗೆ ೫ ಗಜ ಚಿಕ್ಕವರಿಗೆ ೨ ಗಜ ಗಿರಣಿ ಬಟ್ಟೆಯನ್ನು ಸೀದಾದಿಂದ ಹಂಚಲಾಗುವದು. ಇದಲ್ಲದೆ ಕೈಮಗ್ಗದ ಬಟ್ಟೆಗಳಲ್ಲಿ ಪ್ರೌಢನಿಗೆ ೬-೭ ಗಜ ಚಿಕ್ಕವರಿಗೆ ೩-೪ ಗಜ ದೊರೆಯುವದು.

ಮದುರಾದಲ್ಲಿಯ ಒಂದು ಜವಳಿ ಗಿರಣಿಯಲ್ಲಿ ವಿರುದ್ಧ ಟ್ರೇಡ ಯುನಿಯನ್ನಿಗೆ ಸೇರಿದ ಕೂಲಿಕಾರರ ನಡುವೆ ತಿಕ್ಕಾಟವಾಗಿ ಮೂವರಿಗೆ ಗಾಯಗಳಾದವು.

ಪಯ್ಯನೂರಿನಿಂದ ೬ ಮೈಲಿನ ಮೇಲಿದ್ದ ಕರಿವಳ್ಳೂರಲ್ಲಿ ಒಂದು ಸಾವಿರಕ್ಕಿಂತ ಹೆಚ್ಚು ಕಮ್ಯುನಿಸ್ಟರು ಪೋಲೀಸ ದಳದ ಮೇಲೆ ಹಲ್ಲೆ ಮಾಡಿದ್ದರಿಂದ ಪೋಲೀಸರು ಗುಂಡು ಹಾರಿಸಬೇಕಾಯಿತು. ಇದರಲ್ಲಿ ಇಬ್ಬರು ಮರಣ ಹೊಂದಿದರಲ್ಲದೆ ಐವರಿಗೆ ಗಾಯಗಳಾಗಿವೆ.

## ಹೊಸದಿಲ್ಲಿ

ಮಾರ್ಚದಲ್ಲಿ ಇಲ್ಲಿ ನೆರೆಯಲಿರುವ ಅಂತರ ಏಶಿಯಾ ಪರಿಷತ್ತಿಗೆ ಚೀನ ಇರಾಣ ಇಂಡೋನೇಶಿಯಾ ಪಾಲೇಸ್ತಾಯಿನ ಇರಾಕ ಸಿರಿಯಾ ಅಫಗಾನಿಸ್ತಾನ ಮೊದಲಾದ ದೇಶಗಳಿಂದ ಸಹಕಾರದ ಆಶ್ವಾಸನ ಸಿಕ್ಕಿದೆ.

ದೇಶದಲ್ಲಿ ಹಾಲಿನ ಪೂರೈಕೆ ಹೆಚ್ಚಿಸುವದಕ್ಕಾಗಿ ೨೪ ಕಲಮಿನ ಒಂದು ಯೋಜನೆಯನ್ನು ಕೃಷಿ, ಅರಣ್ಯ ಮತ್ತು ಮೀನಗಾರಿಕೆ ಧೋರಣ ಸಮಿತಿಯು ಸೂಚಿಸಿದೆ. ಈ ಯೋಜನೆಯ ಪ್ರಕಾರ ಪಟ್ಟಣ ಹಾಗು ಹಳ್ಳಿಗಳಲ್ಲಿಯ ಹಾಲಿನ ಪೂರೈಕೆ ಹೆಚ್ಚಿಸಲ್ಪಡುವದು. ಗೌಳಿಗರಿಗೆ ವಾಹನ ಸೌಕರ್ಯ ಸಂಗ್ರಾಹಕ ಸಾಧನ, ದನಕರುಗಳಿಗೆ ಆಹಾರ ಮೊದಲಾದವುಗಳನ್ನು ಒದಗಿಸಿ ಕೊಡುವ ವ್ಯವಸ್ಥೆಯನ್ನು ಯೋಜನೆಯಲ್ಲಿ ಮಾಡಲಾಗಿದೆ.

ದೇಶೀ ಔಷಧ ಪದ್ಧತಿಗಳ ಸಂಶೋಧನ ಹಾಗು ಸುಧಾರಣೆಯ ಬಗ್ಗೆ ಒಂದು ವಿಚಾರಣಾ ಸಮಿತಿಯನ್ನು ನೇಮಿಸಲು ಕೇಂದ್ರ ಸರಕಾರವು ನಿರ್ಧರಿಸಿದೆ.

ಸ್ನಾನಕ್ಕಾಗಿ ಬಚ್ಚಲ ಮನೆಗೆ ಹೋದಾಗ ನೀರಿನ ಬಂಬಿನ ಉಗಿಯಿಂದ ಉಬ್ಬಸವಾಗಿ ಮದ್ರಾಸದ ಮುಖ್ಯ ಪ್ರಧಾನರಾದ ಶ್ರೀ ಟಿ. ಪ್ರಕಾಶಂ ಅವರು ಮೂರ್ಛೆ ಹೊಂದಿ ಕುಪ್ಪಳಿಸಿ ಬಿದ್ದರು. ಈಗ ಅವರು ಗುಣ ಹೊಂದುತ್ತಿದ್ದಾರೆ.

ಬ್ರಿಹ್ಮಿ ನಡುಗಾಲ ಸರಕಾರದ ಉಪಾಧ್ಯಕ್ಷರಾದ ಯು ಅಂಗಸಾನರು ಜಾನೇವಾರಿ ೨ ತಾರೀಖಿಗೆ ಹಿಂದುಸ್ತಾನಕ್ಕೆ ಬರುವವರಿದ್ದು ದಿಲ್ಲಿಯಲ್ಲಿ ಪಂಡಿತ ಜವಾಹರಲಾಲರ ಅತಿಥಿಗಳಾಗಿ ಇರಲಿರುವರು. ಮುಂದೆ ಇವರು ಬ್ರಿಹ್ಮೀಪರಿಷತ್ತಿಗಾಗಿ ಲಂಡನ್ನಕ್ಕೆ ತೆರಳುವರು.

## ಸಂಯುಕ್ತಪ್ರಾಂತ

ಅ. ಭಾ. ಹಿಂದು ವಿದ್ಯಾರ್ಥಿ ಪರಿಷತ್ತು ಪ್ರೊ. ವಿ. ಜಿ. ದೇಶಪಾಂಡೆಯವರ ಅಧ್ಯಕ್ಷತೆಯಲ್ಲಿ ಗೋರಖಪುರದಲ್ಲಿ ನೆರೆಯಲಿರುವದು.

ಮುಸೂರೀ ಮುಸ್ಲಿಂಲೀಗಿನ ಅಧ್ಯಕ್ಷರಾದ ಇಸಲುದ್ದೀನರು ಆಕ್ಷೇಪಾರ್ಹ ಭಾಷಣಮಾಡಿ ಶಾಂತಿರಕ್ಷಣೆಯ ಆಜ್ಞೆಯನ್ನು ಮುರಿದದ್ದರಿಂದ ಸರಕಾರವು ಅವರನ್ನು ಬಂಧಿಸಿದೆ.

ಪ್ರಾಂತಿಕವಿಧಿ ಮಂಡಳವು ಜನೆವರಿ ೧೭ ಕ್ಕೆ ಪ್ರಾರಂಭವಾಗುವದು.

ವಿದ್ಯಾಖಾತೆಯ ಮಂತ್ರಿಗಳಾದ ಬಾಬು ಸಂಪೂರ್ಣಾನಂದರು ಜಾತೀಯ ಸೌಹಾರ್ದ ಕವಿ ಸಮ್ಮೇಲನದ ಉದ್ಘಾಟನೆ ಮಾಡುತ್ತ ಕವಿಗಳುಜಾತೀಯ ಸೌಹಾರ್ದ ಸಾಧಿಸಬೇಕೆಂದು ಹೇಳಿದರು.

## ಬಂಗಾಲ

ಜಾಗೃತಿ ಪತ್ರದ ಸಂಪಾದಕರಾದ ಶ್ರೀ ಜಗದೀಶ ಹಿಮಕರ ಇವರ ಕಡೆಯಿಂದ ನಾಲ್ಕು ಸಾವಿರ ರೂಪಾಯಿ ಜಾಮೀನು ಬೇಡಲಾಗಿದೆ.

ಢಾಕಾದ ಕೆಲವೊಂದು ವಿಭಾಗಗಳಲ್ಲಿ ಕರ್ಫ್ಯೂ ಆಜ್ಞೆಯನ್ನು ಎತ್ತಲಾಗಿದೆ.

ಬಂಗಾಲ ಶಾಸನ ಸಭೆಯ ಮುಂಗಡ ಪತ್ರಿಕೆಯ ಅಧಿವೇಶನವು ೧೯೪೭ ಫೆಬ್ರುವರಿ ೩ ಕ್ಕೆ ಪ್ರಾರಂಭವಾಗಿ ಸುಮಾರು ಎರಡು ತಿಂಗಳು ನಡೆಯುವದು.

ಇಲ್ಲಿಯ ಪ್ರತ್ಯಹವೆಂಬ ದಿನಪತ್ರಿಕೆಯು ನವಂಬರದಲ್ಲಿ ಆಕ್ಷೇಪಾರ್ಹ ಲೇಖ ಪ್ರಸಿದ್ಧಿಸಿತ್ತೆಂದು ಆ ಪತ್ರಿಕೆಯ, ಹಾಗೂ ಮುದ್ರಣಾಲಯದ ಒಡೆಯರ ಎರೆಡೆರಡು ಸಾವಿರ ರೂಪಾಯಿಯ ಠೇವನ್ನು ಸರಕಾರವು ಜಪ್ತಮಾಡಿತು.

ಕಲಕತ್ತೆಯ ಗಲಭೆಗಳ ಕಾರಣದಿಂದ ಓಡಿಸಾಪ್ರಾಂತದ ಅಂಚೆ ಹಾಗು ಟಪಾಲ ಸರ್ವಿಸಿನಲ್ಲಿ ತಡೆ ಯುಂಟಾಗಿತ್ತೆಂದು ಅಧಿಕೃತವಾಗಿ ತಿಳಿಯುತ್ತದೆ.

ಕಲಕತ್ತೆಯ ಸೆಂಟ್ರಲ್ ಅವೆನ್ಯೂದಲ್ಲಿರುವ ಒಂದು ಕಟ್ಟಡಕ್ಕೆ ಬೆಂಕಿ ಹತ್ತಿದ್ದರಿಂದ ಅದರಲ್ಲಿದ್ದ ಅನೇಕ ಸರಕಾರೀ ಕಾಗದ ಪತ್ರಗಳು ಸುಟ್ಟಿವೆ.

ಅರಾಕಾನವನ್ನು ಬಂಗಾಲಕ್ಕೆ ಸೇರಿಸಬೇಕೆಂಬ ಚಿತಗಾಂಗ ಮುಸ್ಲಿಂ ವಣಿಕ್ ಸಂಘದ ಸೂಚನೆಗೆ ಉತ್ತರರೂಪವಾಗಿ ಚಿತಗಾಂಗವನ್ನು ಬ್ರಹ್ಮದೇಶಕ್ಕೆ ಸೇರಿಸಬೇಕೆಂದು ಬ್ರಹ್ಮದೇಶದ ನಡುಗಾಲ ಸರಕಾರದ ಉಪಾಧ್ಯಕ್ಷರಾದ ಯು. ಸಾರು ಹೇಳಿದರು.

ಡಿಸೆಂಬರ ೨೭ ನೇ ತಾರೀಖಿನಿರುವ ಗುರುಗೋವಿಂದ ಸಿಂಗರ ಹುಟ್ಟುಹಬ್ಬದ ಮೆರವಣಿಗೆಳಲ್ಲಿ ಶೀಖರು ಕೃಪಾಣ ಧರಿಸಬಾರದೆಂದು ಸರಕಾರವು ವಿಧಿಸಿದೆ. ಈ ಆಜ್ಞೆ ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ಸರಕಾರದ ಮನವೊಲಿಸಲು ಬೇರೆ ಬೇರೆ ಮುಖಂಡರಿಗೆ ಬಿನ್ನವಿಸಲಾಗುತ್ತಿದೆ.

ಗಲಭೆಗಳಿಂದುಂಟಾದ ಪರಿಸ್ಥಿತಿಯ ಮೂಲಕ ಕಲಕತ್ತಾ ಪೌರಸಭೆಯ ಚುನಾವಣೆಗಳು ಒಂದು ವರ್ಷ ಮುಂದೆ ಹಾಕಲ್ಪಡಬಹುದು.

## ಓಡಿಸಾ

ಅಂಚೆ ಹಾಗೂ ತಂತೀಖಾತೆಯ ಸರ್ವಿಸಿನಲ್ಲಿ ಗಲಭೆಯ ಮೂಲಕತಡೆ ಯುಂಟಾಗಿದ್ದರಿಂದ ಅದನುಸುವ್ಯವಸ್ಥೆಗೊಳಿಸಲ ಇಲ್ಲಿ ಒಬ್ಬ ಸ್ವತಂತ್ರ ಪೋಸ್ಟಮಾಸ್ತರ ಜನರಲ್ಲರನ್ನು ನೇಮಿಸಿ ಅವನಿಗೆ ಪ್ರಾಂತದ ಮಟ್ಟಿಗೆ ಸಂಪೂರ್ಣ ಅಧಿಕಾರ ಕೊಡಲಾಗಿದೆ.

ಶಾಸನಸಭೆಯಲ್ಲಿ ಹರಿಜನರ ದೇವಾಲಯ ಪ್ರವೇಶ ಮಸೂದೆಯು ಓಡಿಸಾದ ಮುಂಗಡ ಪತ್ರಿಕೆಯ ಅಧಿವೇಶನದಲ್ಲಿ ಮಂಡಿಸಲ್ಪಡುವದು.

ಶ್ರೀ ಸೀತಾಚಂಡಿ ಮಹಾಯಜ್ಞ ಮತ್ತು ಸನಾತನ ಧರ್ಮಿಗಳ ಪರಿಷತ್ತು ಪಾಟಣಾದಲ್ಲಿ ದಿನಾಂಕ ೧೮ ರಿಂದ ೨೦ ವರೆಗೆ ಶ್ರೀ ಜಗದ್ಗುರು ಶಂಕರಾಚಾರ್ಯ ಮಹಾರಾಜದ್ವಾರಕಾ ಪೀಠ ಇವರ ಅಧ್ಯಕ್ಷತೆಯಲ್ಲಿ ನೆರವೇರಿದವು.

## ಸಿಂಧ

ಪ್ರಾಂತದಲ್ಲಿ ಪುನರ್ರಚನೆಯ ಯೋಜನೆಗಳಿಗೆ ತಗಲುವ ಹೆಚ್ಚಿನ ವೆಚ್ಚಕ್ಕಾಗಿ ಮಾರಾಟಕರ,ಪಾರಸಾಕರ, ಭೂಸುಧಾರಣೆ ಕರ, ವ್ಯವಸಾಯ ಕರ ಮೊದಲಾದ ಹೊಸಕರಗಳನ್ನು ಹೇರಲಾಗುವದು.

ಸತ್ಯಾರ್ಥ ಪ್ರಕಾಶದ ೧೪ ನೇ ಪ್ರಕರಣದ ಮೇಲಿನ ಸಿಂಧ ಸರಕಾರದ ನಿರ್ಬಂಧವನ್ನು ಪ್ರತಿಭಟಿಸುವದಕ್ಕಾಗಿ ವೈಯಕ್ತಿಕ ಸತ್ಯಾಗ್ರಹ ಹೂಡಬೇಕೆಂದು ಆರ್ಯ ಪ್ರತಿನಿಧಿ ಸಭೆಯು ನಿರ್ಧರಿಸಿತು.

ಸಿಂಧು ನದಿಯ ನೀರಿನ ಹಂಚಿಕೆಯ ಬಗ್ಗೆ ಪಂಜಾಬ ಮತ್ತು ಸಿಂಧ ಸರಕಾರಗಳಲ್ಲಿ ತಿಕ್ಕಾಟ ನಡೆದಿದೆ. ಒಮ್ಮತವಾಗದಿದ್ದರೆ ಪ್ರಶ್ನೆಯನ್ನು ಭಾರತ ಮಂತ್ರಿಗಳ ಕಡೆಗಾಗಲಿ ಅಥವಾ ವೈಸರಾಯರು ನೇಮಿಸಿದ ತಜ್ಞರ ಸಮಿತಿಗಾಗಲಿ ಒಪ್ಪಿಸಲಾಗುವದು.

ಅ. ಭಾ. ಹಿಂದೀ ಸಾಹಿತ್ಯ ಸಮ್ಮೇಲನದ ೩೪ನೇ ಅಧಿವೇಶನವು ಕರಾಚಿಯಲ್ಲಿ ನೆರೆಯುವದು. ಹಿಂದೀ ಹರಿಜನದ ಹಿಂದಿನ ಸಂಪಾದಕರಾಗಿದ್ದ ಶ್ರೀ ವಿಯೋಗಿಯವರು ಅಧ್ಯಕ್ಷತೆ ವಹಿಸುವರು.

## ಸಂಸ್ಥಾನಗಳು

ಪತಿಯಾಳಾ ಸಂಸ್ಥಾನದಲ್ಲಿ ನಡುಗಾಲ ಸರಕಾರ ಸ್ಥಾಪಿಸಬೇಕೆಂದು ಅಲ್ಲಿಯ ಪ್ರಜಾಮಂಡಳವು ಬಿನ್ನವಿಸಿಕೊಂಡಿದೆ.

ತಿರವಾಂಕೂರ ಮಹಾರಾಜರ ಇಚ್ಛೆಯನ್ನು ಮನ್ನಿಸಿ ಸರ್ ಸಿ. ಪಿ. ರಾಮಸ್ವಾಮಿ ಅಯ್ಯರರು ಆ ಸಂಸ್ಥಾನದ ದಿವಾನಗಿರಿಯನ್ನು ಸದ್ಯಕ್ಕೆ ಬಿಟ್ಟುಕೊಡುವದಿಲ್ಲ.

ಕೊಲ್ಹಾಪುರ ಪ್ರಜಾಮಂಡಳದ ಕೇಂದ್ರ ಸಮಿತಿಯವರು ಸಂಸ್ಥಾನದಲ್ಲಿ ಪ್ರತ್ಯಕ್ಷ ಹೋರಾಟಹೂಡುವ ಬಗ್ಗೆ ಡಾ. ಪಟ್ಟಾಭಿ ಸೀತಾರಾಮಯ್ಯನವರ ಕಡೆಗೆ ಸಲಹೆ ಪಡೆಯಲು ಹೋಗಿರುವರು.

ಜೋಧಪೂರ ಸಂಸ್ಥಾನದ ಮಹಾರಾಜರು ಇಂಗ್ಲಂಡದಿಂದ ರೋಢ ನಡುಗಡ್ಡೆಯ ಕೆಂಪು ಜಾತೀಯ ಕೋಳಿಗಳನ್ನು ತರಿಸಿದ್ದಾರೆ.

ಹೈದ್ರಾಬಾದ ಸಂಸ್ಥಾನದ ಹೊಸ ರಾಜಕೀಯ ಸುಧಾರಣೆಗಳ ಚುನಾವಣೆಗಳ ಪರಿಣಾಮಗಳು ಪ್ರಕಟಿಸಲ್ಪಟ್ಟಿವೆ.

ನಿಜಾಂ ಸಂಸ್ಥಾನದಲ್ಲಿಯ ಕಮ್ಯುನಿಸ್ಟರ ಚಟುವಟಿಕೆ ಮತ್ತು ಅವುಗಳ ಬಗ್ಗೆ ನಿಜಾಂ ಸರಕಾರವು ಕೈಕೊಂಡ ಕ್ರಮಗಳನ್ನು ಶ್ರೀ ದ್ವಾರಕಾನಾಥ ಕಚ್ರೂರವರು ಅಭ್ಯಸಿಸುತ್ತಿದ್ದಾರೆ.

ನಿಜಾಂ ಸಂಸ್ಥಾನದಲ್ಲಿ ಅಸ್ಪೃಶ್ಯತಾ ನಿವಾರಣೆಗಾಗಿ ಅಸ್ಪೃಶ್ಯತಾ ವಿರೋಧಿ ಸಂಘದ ಸ್ಥಾಪನೆಯಾಗಿದೆ.

ನಿಜಾಂ ಸಂಸ್ಥಾನದಲ್ಲಿ ಹೈದ್ರಾಬಾದದಿಂದ ನಾಲ್ಕು ಮೈಲು ದೂರದಲ್ಲಿರುವ ಬೇಗಂಪೇಟೆ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಸಂಸ್ಥಾನವು ೫ ಲಕ್ಷ ರೂಪಾಯಿ ವೆಚ್ಚಮಾಡಲಿದೆ.

ಮಿರಜ ಪ್ರಜಾ ಪರಿಷತ್ತಿನ ಅಧಿವೇಶನವು ಇದೇ ದಿ. ೨೫ ಕ್ಕೆ ಮೋಡನಿಂಬದಲ್ಲಿ ರಾವಸಾಹೇಬ ಪಟವರ್ಧನರ ಅಧ್ಯಕ್ಷತೆಯಲ್ಲಿ ನೆರಿತ್ತು.

ದೇವರು ನಮ್ಮೆಲ್ಲರನ್ನು ಯಾವ ಭೇದಭಾವವಿಲ್ಲದೆ ಈ ಭೂ-ದೇವಾಲಯದಲ್ಲಿ ಇರಗೊಟ್ಟಾಗ ಹರಿಜನರಿಗೆ ದೇವಾಲಯಗಳನ್ನು ಮುಕ್ತದ್ವಾರ ಮಾಡುವದೇ ಯೋಗ್ಯವೆಂದು ಶ್ರೀ ರಾಜಾಜಿಯವರು ಇಂದೂರಿನಲ್ಲಿ ಮಾಡಿದ ಭಾಷಣದಲ್ಲಿ ಹೇಳಿದರು.

ತಿರುವಾಂಕೂರಿನಲ್ಲಿಕೊಬ್ಬರಿ ಮತ್ತು ಕೊಬ್ಬರಿ ಎಣ್ಣೆಯ ದರಗಳನ್ನು ನಿಯಂತ್ರಿಸಲಾಗಿದೆ. ಒಣಗಿದ ಕೊಬ್ಬರಿಯ ದರವು ಟನ್ನಿಗೆ ೮೦೦—೪೪೪ ರೂ. ಹಾಗೂ ಕೊಬ್ಬರೀ ಎಣ್ಣೆಯ ದರವು ಟನ್ನಿಗೆ ೧೩೩೦—೧೪೪೦ ರೂ. ಇರಬೇಕೆಂದು ವಿಧಿಸಲಾಗಿದೆ.



# ಸ್ವಾಯತ್ತ ಏಕೀಕೃತ ಕರ್ನಾಟಕ ಪ್ರಜಾರಾಜ್ಯವೇ ನಮ್ಮ ಅಂತಿಮಗುರಿ

## ಅಖಿಲ ಕರ್ನಾಟಕ ವಿದ್ಯಾರ್ಥಿ ಕಾಂಗ್ರೆಸ ಅಧಿವೇಶನ

### ಮೈಸೂರ ಕಾಂಗ್ರೆಸ್ಸಿಗೆ ಧೋರಣ ಬದಲಿಸಲು ವಿನಂತಿ

ಅಖಿಲ ಕರ್ನಾಟಕ ವಿದ್ಯಾರ್ಥಿ ಕಾಂಗ್ರೆಸ್ಸಿನ ಅಧಿವೇಶನವು ತಾ ೨೨ ಕ್ಕೆ ಶಿವಮೊಗ್ಗೆಯಲ್ಲಿ ಶ್ರೀ ಜಯಪ್ರಕಾಶ ನಗರದಲ್ಲಿ ಹಿಂದುಸ್ತಾನಿ ತಾಲೀಮಿ ಸಂಘದ ಕಾರ್ಯದರ್ಶಿಗಳಾದ ಶ್ರೀ ಜಿ. ರಾಮಚಂದ್ರನ್‌ರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ಸ್ವಾಗತಾಧ್ಯಕ್ಷರಾದ ಶ್ರೀ ಗುರಲಿಂಗಪ್ಪ ಜವಳಿಯವರು ಅಧ್ಯಕ್ಷರನ್ನೂ ಪ್ರತಿನಿಧಿಗಳನ್ನೂ ಸ್ವಾಗತಿಸಿ ಭಾಷಣ ಮಾಡಿದಮೇಲೆ ಶ್ರೀ ಹಾರನಹಳ್ಳಿ ರಾಮಸ್ವಾಮಿಯವರು ಅಧಿವೇಶನಕ್ಕೆ ಶುಭ ಕೋರಿ ಶ್ರೀಯುತರಾದ ಅಚ್ಯುತ ಪಟವರ್ಧನ,ರಂಗರಾವ ದಿವಾಕರ, ಮೆಹರಅಲ್ಲಿ, ಮೊದಲಾದವರಿಂದ ಬಂದ ಸಂದೇಶಗಳನ್ನು ಓದಿದರು. ಅನಂತರ ಶ್ರೀ ಟಿ. ಸಿದ್ಧಲಿಂಗಪ್ಪನವರು ಅಧಿವೇಶನದ ಉದ್ಘಾಟನೆ ಮಾಡಿದರು.

ಅಧಿವೇಶನಕ್ಕೆ ಬೇರೆ ಬೇರೆ ಭಾಗಗಳಿಂದ ಸುಮಾರು ೨೦೦ ಪ್ರತಿನಿಧಿಗಳು ಬಂದಿದ್ದರು. ಆ ಮೇಲೆ ಪುರುಷೋತ್ತಮ ತ್ರಿಕಮದಾಸರು ಬರೆದ್ದರಿಂದ ಅಧ್ಯಕ್ಷತೆ ವಹಿಸಿದ್ದ ಶ್ರೀ ಜಿ.ರಾಮಚಂದ್ರನ್‌ರು ತಮ್ಮ ಭಾಷಣ ಪ್ರಾರಂಭಿಸಿ ಬ್ರಿಟಿಶ ತೋಪುಗಳನ್ನು ಎದುರಿಸಿ ಕಳೆದ ಸ್ವಾತಂತ್ರ್ಯ ಯುದ್ಧ ಹೋರಾಡಿದ ತರುಣರನ್ನು ಅಭಿನಂದಿಸಿದಲ್ಲದೆ ಮುಂದಿನಹೋರಾಟಕ್ಕಾಗಿ ಶಿಸ್ತಿನಿಂದ ಸಿದ್ಧರಾಗಲು ಕೇಳಿಕೊಂಡರು. ಅವರು ಸ್ವಾತಂತ್ರ್ಯ ಚಳವಳಿಯನ್ನು ಹಳ್ಳಿಗಳಿಗೂ ಮುಟ್ಟಿಸಿ ವಿಧಾಯಕ ಕಾರ್ಯಕ್ರಮದಿಂದ ಹಳ್ಳಿಗಳಲ್ಲಿ ಹೊಸ ಚೈತನ್ಯ ಹುಟ್ಟಿಸಲು ತಿಳಿಸಿದರು.

ಅನಂತರ ಅವರು ಚನ್ನಪಟ್ಟಣಗಲಭೆ ಕಡೆಗೆ ಹೊರಳಿ ಮೈಸೂರ ಕಾಂಗ್ರೆಸ್ಸಾಗಲಿ ವಿದ್ಯಾರ್ಥಿ ಕಾಂಗ್ರೆಸ್ಸಾಗಲಿ ಆಹ್ವಾನವನ್ನು ಮಹಾತ್ಮಾಗಾಂಧಿಯವರಂಥ ವಿಶಾಲ ರಾಷ್ಟ್ರೀಯ ಮನೋದೃಷ್ಟಿಯಿಂದ ಸ್ವೀಕರಿಸಬೇಕೆಂದು ಹೇಳಿ ಸಾರ್ವಭೌಮಾಧಿಕಾರದ ಸಂಬಂಧದಲ್ಲಿ ಸರ್ ಸಿ. ಪಿ. ರಾಮಸ್ವಾಮಿಯವರು ತೆಗೆದ ಉದ್ಗಾರಗಳನ್ನು ಖಂಡಿಗಿದರು. ಮತ್ತು ಜನರಿಂದಲೆ ರಾಜನ ಅಸ್ತಿತ್ವವಿರುವದೆಂದು ಸಾರಿದರು.

ಇಷ್ಟಕ್ಕೆ ಅವರು ಬೆಂಗಳೂರಿಗೆ ಹೋಗಬೇಕಾದ್ದರಿಂದ ಅಧ್ಯಕ್ಷಪದವನ್ನು ಶ್ರೀ ಸಿದ್ಧವ್ವನಹಳ್ಳಿ ಕೃಷ್ಣಶರ್ಮರಿಗೆ ಒಪ್ಪಿಸಿದರು. ಅನಂತರ ಭುಲಾಭಾಯಿ ದೇಸಾಯಿ, ಕೈಲಾಸಂ, ಪಂ. ಮಾಲವಿಯಾ, ಬಿ. ಎಂ. ಶ್ರೀಕಂಠಯ್ಯ ಹಾಗು ಚನ್ನಪಟ್ಟಣ ಹಾಯಸ್ಕೂಲಿನ ಹೆಡ್ಡಮಾಸ್ತರರಾದ ವೆಂಟಾರ ಶ್ರೀನಿವಾಸಾಚಾರ್ಯರ ನಿಧನ ಕುರಿತು ದುಃಖ ಪ್ರದರ್ಶನ ನಡೆದು ಸುಮಾರು ೨೪ ನಿರ್ಣಗಳು ಸ್ವೀಕೃತವಾದವು.

ಅವುಗಳಲ್ಲಿ ಸ್ವಾಯತ್ತ ಏಕೀಕೃತ ಕರ್ನಾಟಕ ಪ್ರಜಾರಾಜ್ಯವನ್ನು ಸ್ಥಾಪಿಸಬೇಕು. ಈ ಸೂರ ಹಾಗು ಶ್ರವಣಬೆಳಗುಳ ಕೈದಿಗಳನ್ನು ಬಿಡಲು ಕೇಳಿಕೊಳ್ಳಬೇಕು, ಮಹಾರಾಜರ ಕೃಪಾಶ್ರಯದಲ್ಲಿ ಹೊಣೆಗಾರ ರಾಜ್ಯಪದ್ಧತಿಯ ಬೇಡಿಕೆಯ ಧೋರಣವನ್ನೂ ಮೈಸೂರ ಹಾಗು ಕಾಂಗ್ರೆಸ ಹೀಗೆ ಎರಡು ಧ್ವಜಗಳನ್ನು ಏರಿಸುವದನ್ನೂ ಬದಲಿಸಲು ಮೈಸೂರ ಕಾಂಗ್ರೆಸಿಗೆ ವಿನಂತಿಸಬೇಕು. ಇವು ಮುಖ್ಯವಾಗಿರುವವು. ಉಳಿದವುಗಳಲ್ಲಿ ಸದ್ಯದ ಶಿಕ್ಷಣ ಪದ್ಧತಿಯನ್ನು ಹೊಸಸಾಮಾಜಿಕ ಮೂಲ ಪದ್ಧತಿಗೆ ಬದಲಿಸಲು ಕೇಳಿಕೊಳ್ಳಬೇಕು, ಹಾಯಸ್ಕೂಲ ಹಾಗು ಕಾಲೇಜಗಳಲ್ಲಿ ಒತ್ತಾಯದ ಮಿಲಿಟರಿ ಶಿಕ್ಷಣ ಪ್ರಾರಂಭಿಸಲು ಸಂಬಂಧಿಸಿದ ಅಧಿಕಾರಿಗಳಿಗೆ ವಿನಂತಿಸಬೇಕು, ವಂದೇ ಮಾತರಂ ಗೀತೆಗೆ ಶಾಲೆಗಳಲ್ಲಿ ಪ್ರತಿಬಂಧ ಹಾಕಿದ್ದನ್ನು ನಿಷೇಧಿಸುವದು, ಗೋವಾ ಸತ್ಯಾಗ್ರಹಕ್ಕೆ ಬೆಂಬಲಕೊಡುವದು, ಸಂಯುಕ್ತ ರಾಷ್ಟ್ರ ಸಭೆಯಲ್ಲಿ ಹಿಂದೀಯರ ಮಾನ ರಕ್ಷಿಸಿದ್ದಕ್ಕಾಗಿ ವಿಜಯಲಕ್ಷ್ಮಿಯವರನ್ನು ಅಭಿನಂದಿಸುವದು ಮೊದಲಾದವುಗಳಿರುವವು.

ಮೈಸೂರ ಕಾಂಗ್ರೆಸ ಅಧ್ಯಕ್ಷರಾದ ಶ್ರೀ ಚೆಂಗಲರಾಯರೆಡ್ಡಿಯವರು ಪರಿಷತ್ತಿನಲ್ಲಿ ವಿಶೇಷತಃ ವಿದ್ಯಾರ್ಥಿಗಳನ್ನು ಕುರಿತು ಭಾಷಣ ಮಾಡುತ್ತ ಜಾತೀಯ ಭಾವನೆ ಬದಿಗಿಟ್ಟು ರಾಷ್ಟ್ರೀಯತೆಯಿಂದ ಕಾರ್ಯಮಾಡಬೇಕೆಂದೂ ಈ ಬಗ್ಗೆ ಅಂತರ್ಜಾತೀಯ ವಿವಾಹ,ಭೋಜನ ಮೊದಲಾದ ಉಪಾಯಗಳನ್ನು ಕೈಕೊಳ್ಳಬೇಕೆಂದೂ ಸ್ವಾತಂತ್ರ್ಯ ಯುದ್ಧದಲ್ಲಿ ಭಾಗ ವಹಿಸಲು ಅಭ್ಯಾಸ ಬಿಡಬೇಕಾದ ಪ್ರಸಂಗ ಬಂದರೂ ಹಿಂದೆ ಮುಂದ ನೋಡಕೂಡದೆಂದೂ ಆಕಾಶವು ಕಳಚಿಬಿದ್ದರೂ ಭೂಮಿಯು ಬಿರಿದರೂ ವಿದ್ಯಾರ್ಥಿಗಳು ದೇಶದ ಸ್ವಾತಂತ್ರ್ಯ ಹಾಗು ಮೈಸೂರಲ್ಲಿ ಹೊಣೆಗಾರ ರಾಜ್ಯ ಪದ್ಧತಿ ಗುರಿಯಿಂದ ಕದಲತಕ್ಕದ್ದಲ್ಲವೆಂದೂ ತಿಳಿಸಿದರು.

ಆಮೇಲೆ ಶ್ರೀಯುತರಾದ ಎಚ್. ಸಿದ್ಧಯ್ಯ ಭೂಪಾಲಂ ಚಂದ್ರಶೇಖರಯ್ಯ, ಎಸ್. ವ್ಹಿ. ಕೃಷ್ಣಮೂರ್ತಿ, ಕೆ. ಜಿ. ಒಡೆಯರ ಮೊದಲಾದವರ ಭಾಷಣಗಳಾಗಿ ಅಧ್ಯಕ್ಷರಾದ ಶ್ರೀ ಕೃಷ್ಣಶರ್ಮರ ಸಮಾರೋಪ ಭಾಷಣವಾಯಿತು.

ಅವರು ಕರ್ನಾಟಕವು ಏಕೀಕೃತವಾಗಿದೆಂದು ತಿಳಿದುಕೊಂಡೇ ಇನ್ನು ಮುಂದೆ ಸಾರಬೇಕಾಗಿ ತಿಳಿಸಿ, ಕವಿವರ್ಯ ಬೇಂದ್ರೆಯವರ "ಉಧೋ ಉಧೋ ಒಳಗಿರುವ ಬೆಳಕೆ, ಹೊರಗೆ ಬಾರದಿಹೆ ಏಕೆ" ಎಂಬ ಅವತರಣಿಕೆ ಉಲ್ಲೇಖಿಸಿ, ಉಧೋ ಉಧೋ ಒಳಗಿರುವ ಹುರುಪು, ಹರಿ ಹುಚ್ಚು ಹೊಳೆಯಾಗಿ ಹರಿ ಎಂದು ಆಶೀರ್ವದಿಸಿದರು. ಶ್ರೀ ಮುದ್ದಪ್ಪನವರು ಆಭಾರ ಮನ್ನಿಸಿದ ಮೇಲೆ ಅಧಿವೇಶನವು ಮುಕ್ತಾಯವಾಯಿತು.

ಬರುವ ವರ್ಷಕ್ಕೆ-ಶ್ರೀ. ಬಿ. ಶ್ರೀಕಾಂತಪ್ಪನವರು ಪ್ರಧಾನ ಕಾರ್ಯದರ್ಶಿಗಳಾಗಿಯೂ ಶ್ರೀಯುತರಾದ ಯೋಗೇಶ್ವರ ಹೊಳ್ಳ ಹಾಗ. ಎಂ. ಪಿ. ಪರಮೇಶ್ವರಪ್ಪನವರು ಜೊತೆ ಕಾರ್ಯದರ್ಶಿಗಳಾಗಿಯೂ ಆರಿಸಲ್ಪಟ್ಟರು. ಮುಂದಿನ ಅಧಿವೇಶನಕ್ಕೆ ಮಂಗಳೂರಿನ ಆಮಂತ್ರಣ ಸ್ವೀಕರಿಸಲಾಯಿತು. ದಿಲ್ಲಿಯಲ್ಲಿಯ ಅ. ಭಾ. ವಿದ್ಯಾರ್ಥಿ ಕಾಂಗ್ರೆಸ್ಸಿಗೆ ಶಿವಮೊಗ್ಗೆಯ ಕೆ. ಎಸ್. ಜಯರಾಮ ಹಾಗು ದಾವಣಗೆರೆಯ ಟಿ. ಭೂಪಾಲರು ಕರ್ನಾಟಕ ವಿದ್ಯಾರ್ಥಿ ಕಾಂಗ್ರೆಸಿನ ಪ್ರತಿನಿಧಿಗಳಾಗಿ ಕಳಿಸಲ್ಪಟ್ಟರು.

ಅಧಿವೇಶನ ಪ್ರಾರಂಭಕ್ಕಿಂತ ಪೂರ್ವದಲ್ಲಿ ಮುಂಜಾನೆ ಜಿ. ರಾಮಚಂದ್ರನರ ಹಸ್ತದಿಂದ ತ್ರಿವರ್ಣ ಧ್ವಜಾರೋಹಣ ಜರುಗಿತು. ಅವರ ಧ್ವಜದ ಮಹತ್ವ ವಿವರಿಸಿ ರಾಜರೂ ಮಹಾರಾಜರೂ ಅದಕ್ಕೆ ನಮಿಸುವ ಕಾಲ ಬೇಗನೆ ಬರುವದೆಂದು ತಿಳಿಸಿದರು.

ಅಧಿವೇಶನದಲ್ಲಿ ಪತ್ರಿಕೋದ್ಯಮದ ಉಚ್ಚ ಶಿಕ್ಷಣಕ್ಕಾಗಿ ಅಮೇರಿಕೆಗೆ ಹೋಗಲಿದ್ದ ಶ್ರೀ ನಾಡಿಗ ಕೃಷ್ಣಮೂರ್ತಿಯವರನ್ನೂ ಸನ್ಮಾನಿಸಲಾಯಿತು.

## ಉತ್ತರ ಕನ್ನಡ

ಜಿಲ್ಹೆಯಲ್ಲಿ ರಾಷ್ಟ್ರ ಸೇವಾದಲದ ಮಹಿಳಾ ಶಾಖೆಗಳನ್ನು ಸಂಘಟಿಸಲು ಕಾರವಾರದಲ್ಲಿ ಒಂದು ಬಾಲಿಕೆಯರ ಶಿಬಿರವು ಪ್ರಾರಂಭವಾಗಿದೆ.

ಕೇಂದ್ರ ಅಬಕಾರಿ ಖಾತೆಯ ಕೆಳ ವರ್ಗ ನೌಕರರು ತಮ್ಮ ಸಂಕಷ್ಟಗಳನ್ನು ನಿವಾರಿಸಿಕೊಳ್ಳಲು ತಮ್ಮದೊಂದು ಸಂಘವನ್ನು ಸ್ಥಾಪಿಸಿಕೊಂಡಿದ್ದಾರೆ.

ಅಕ್ಕಿ ಸೀದಾ ಕಡಿಮೆ ಮಾಡಿ ಅದರ ಬದಲು ಗೋದಿಯನ್ನು ಕೊಡಹತ್ತಿದ್ದರಿಂದ ಜನರು ಅದು ತಮ್ಮ ಆರೋಗ್ಯಕ್ಕೆ ಒಗ್ಗುವದಿಲ್ಲೆಂದು ಆಹಾರ ಮಂತ್ರಿಗಳಿಗೆ ದೂರಿಕೊಂಡಿದ್ದಾರೆ.

# ಬ್ರಿಟಿಶ ಸರಕಾರದ ಬದಲಾಗುವ ಬಣ್ಣ

(೪ ನೇ ಪುಟದಿಂದ ಮುಂದರಿದುದು)

ರಿಸಿ ಪ್ರತ್ಯೇಕ ಸ್ವತಂತ್ರ ಪಾಕಿಸ್ತಾನದ ಬೇಡಿಕೆಯನ್ನು ಮತ್ತೆ ಮುಂದೊತ್ತಿತು. ಈಗ ಮಾತುಹೊರಳಿಸಿ ಅನೇಕ ತಿಂಗಳುಗಳ ನಂತರ ಸರಕಾರ ನಡುವೆ ಕೈಹಾಕಿದ್ದರಿಂದ ಹಿಂದೀ ಜನತೆಯ ಮನಸಿನಲ್ಲಿ ಸಂಶಯ.ಗಳೂ ಪರಿಸ್ಥಿತಿಯಲ್ಲಿ ಹೊಸ ತೊಡಕುಗಳೂ ಉಂಟಾಗಿವೆ ಇದರಿಂದ ಭವಿಷ್ಯತ್ತು ಗಂಡಾಂತರದುಮುವಾಗುವ ಕಾಲ ಬಂದಿದೆಯೆಂದು ಕಾರ್ಯಸಮಿತಿ ಹೇಳುತ್ತದೆ.

### ಕೋರ್ಟಿಗೆ ಹೋಗುವದು ವ್ಯರ್ಥ

ಸಂದಿಗ್ಧವಾದ ಶಬ್ದಗಳ ಅರ್ಥ ವಿವರಣೆ ಮಾಡುತ್ತ ಬ್ರಿಟಿಶ ಸರಕಾರದವರು ಡಿಸೆಂಬರ ೬ ರ ಹೇಳಿಕೆಯಲ್ಲಿ ಅದೇ ಮೂಲಭೂತ ವಿಷಯವೆಂದು ಹೇಳಿ ಮತ್ತೆ ಬೇಕಾದರೆ ಘಟನಾ ಸಮಿತಿ ಫೆಡರಲ್ ಕೋರ್ಟಿಗೆ ಹೋಗಬಹುದೆಂದು ಹೇಳಿದರು. ಆದರೆ ಮುಂದೆ ಫೆಡರಲ್ ಕೋರ್ಟಿನ ನಿರ್ಣಯಕ್ಕೆ ತಾವು ಬದ್ಧರಲ್ಲವೆಂದೂ ಅವರೇ ಹೇಳಿದರು. ಜಿನ್ನಾ ಸಾಹೇಬರೂ ತಾವು ಫೆಡರಲ್ ಕೋರ್ಟಿನ ನಿರ್ಣಯಕ್ಕೆ ಬದ್ಧರಲ್ಲವೆಂದು ಸಾರಿದಾರೆ. ಅಂದಬಳಿಕ ಈ ವಿಷಯವನ್ನು ಕೋರ್ಟಿಗೆ ಒಯ್ಯುವದು ಕಾಂಗ್ರೆಸಿನ ಹಾಗು ಆ ಕೋರ್ಟಿನ ಗೌರವಕ್ಕೆ ಧಕ್ಕೆಯುಂಟುಮಾಡುವ ಮಾತು. ಬ್ರಿಟಿಶ ಸರಕಾರದವರು ಕೊಡುವ ಹೇಳಿಕೆಗಳಿಂದ ಕೋರ್ಟಿನ ನಿರ್ಣಯ ಪಡೆಯುಲು ಅವಕಾಶವೇ ಇಲ್ಲದಂತಾಗಿದೆ.

### ಸಹಕಾರದ ಪ್ರಯತ್ನ

ಕೊನೆಯಲ್ಲಿ ಕಾರ್ಯಸಮಿತಿ ಮುಸ್ಲಿಂ ಲೀಗಿನವರು ಘಟನಾ ಸಮಿತಿಯಿಂದ ಹೊರಗುಳಿದುದಕ್ಕೆ ವಿಷಾದ ವ್ಯಕ್ತಗೊಳಿಸಿ ಅವರ ಸಹಕಾರ ದೊರೆಯುವದೆಂಬ ಆಶೆಯನ್ನು ವ್ಯಕ್ತಗೊಳಿಸಿದೆ ಅಲ್ಲದೆ ಘಟನಾ ಸಮಿತಿಯ ಕಾರ್ಯಗಳಿಗೆ ಆತಂಕ ಬಾರದಂತೆ ಹಾಗು ಮೂಲಭೂತ ತತ್ವಗಳಿಗೆ ಚ್ಯುತಿ ಬಾರದಂತೆ ಎಲ್ಲ ಪಕ್ಷಗಳ ಸಹಕಾರವನ್ನು ದೊರಕಿಸಲು ಕಾಂಗ್ರೆಸ್ಸು ಪ್ರಯತ್ನಿಸುವದೆಂದೂ ವಿಶದಗೊಳಿಸಿದ್ದಾರೆ. ವಿಷಯದ ಮಹತ್ವವನ್ನು ಗಮನಿಸಿ ಅ. ಭಾ. ಕಾಂಗ್ರೆಸ್ ಅಧಿವೇಶನವನ್ನು ಜನೆವರಿ ಆದಿಯಲ್ಲಿ ಕರೆಯಲಾಗುವದೆಂದೂ ತಿಳಿಸಲಾಗಿದ್ದು ಮುಂದೆ ತಾ. ೬ಕ್ಕೆ ಅವಸರದ ಅಧಿವೇಶನ ಜರಗುವದೆಂದು ಪ್ರಕಟನೆ ಹೊರಟಿದೆ.

### ಮುಂದೇನು ?

ಈ ಪ್ರಕಾರ ಅಖಿಲಭಾರತ ಕಾಂಗ್ರೆಸ್ ಸಮಿತಿಯ ಮುಂದೆ ಬ್ರಿಟಿಶ ಘೋಷಣೆಯನ್ನು ಸ್ವೀಕರಿಸುವ ಇಲ್ಲವೆ ನಿರಾಕರಿಸುವ ಪ್ರಶ್ನೆ ನಿಂತಿದೆ. ನಡುಗಾಲ ಸರಕಾರದಲ್ಲಿ ಮುಸ್ಲಿಂ ಲೀಗ್ ಸದಸ್ಯರು ಬಂದನಂತರ ಅವರ ಸ್ವಾತಂತ್ರ್ಯಕ್ಕೆ ಧಕ್ಕೆ ಬರತೊಡಗಿದೆ. ಈ ವಿಚಾರವನ್ನೂ ಅ. ಭಾ. ಕಾಂಗ್ರೆಸ್ಸು ಮಾಡಬೇಕಾಗುವದು. ಜಿನ್ನಾಸಾಹೇಬರಂತೂ ಕಾಂಗ್ರೆಸ್ಸು ನಿಸ್ಸಂದಿಗ್ಧವಾಗಿ ಬ್ರಿಟಿಶ ಘೋಷಣೆಗೆ ಬ್ರಿಟಿಶ ಸರಕಾರಹಚ್ಚಿದ ಅರ್ಥವನ್ನೇ ಸ್ವೀಕರಿಸಬೇಕು, ಇಲ್ಲದಿದ್ದರೆ ತಾವು ಲೀಗ್ ಕೌನ್ಸಿಲ್ ಕರೆಯುವ ಸಂಭವವೇ ಇಲ್ಲ, ಎಂದು ಸಾರಿದ್ದಾರೆ. ಈ ಪರಿಸ್ಥಿತಿಯಲ್ಲಿ ಕಾಂಗ್ರೆಸ್ಸು ಮೇಲೆ ಹೇಳಿದ ಹೇಳಿಕೆಯಲ್ಲಿ ಸೂಚಿಸಿದ ಸಹಕಾರದ ಪ್ರಯತ್ನವನ್ನು ಎಷ್ಟು ದೂರ ಸಾಗಿಸಬಲ್ಲದೋ ಹೇಳಲಾಸಲ್ಲ-ಇತ್ತ ಗುಂಪುಗಳ ಯೋಜನೆಯಿಂದ ಹಾನಿಗೀಡಾಗುವ ಪ್ರಾಂತಗಳ ರಾಜಕಾರಣಿಗಳು ಐಕ್ಯದ ದೃಷ್ಟಿಯಿಂದ ಎಷ್ಟು ಸ್ವಾರ್ಥತ್ಯಾಗ ಮಾಡಲು ಸಿದ್ಧರಿರುವರೋ ಹೇಳಬರುವದಿಲ್ಲ. ಗಡಿನಾಡಿನ ವಾಯವ್ಯ ಮಂತ್ರಿ ಡಾ. ಖಾನಸಾಹೇಬರು ಗುಂಪುಗಳಿಗೂ ತಮಗೂ ಯಾವ ಸಂಬಂಧವೂ ಇಲ್ಲವೆಂದೂ ಪಠಾಣರ ಮೇಲೆ ಅವರಿಗೆ ಬೇಡವಾದ ಘಟನೆಯನ್ನು ಯಾರೂ ಹೊರಿಸಲಾರರೆಂದೂ ಸ್ಪಷ್ಟವಾಗಿ ಸಾರಿದ್ದಾರೆ. ಪಂಜಾಬದ ಸೀಖರು ಡಿಸೆಂಬರ ೬ ರ ಘೋಷಣೆಯಿಂದ ತಮಗಾದ ಹಾನಿಯನ್ನು ವಿಚಾರಿಸಿ ತಮಗೆ ಯೋಗ್ಯ ಸಂರಕ್ಷಣೆ ದೊರೆಯುವ ವರೆಗೆಹೋರಾಡುವ ನಿಶ್ಚಯ ಮಾಡಿದ್ದಾರೆ. ಅದಲ್ಲದೆ ಘಟನಾ ಸಮಿತಿಯ ಅಲ್ಪ ಸಂಖ್ಯಾಕ ಸಲಹೆ ಸಮಿತಿಯಲ್ಲಿ ಸೀಖರ ಪ್ರತಿನಿಧಿಗಳು ಅಧಿಕವಾಗಿರಬೇಕೆಂದೂ ಘಟನಾಸಮಿತಿಯಲ್ಲಿರುವ ಶೀಖರ ಬಹುಮತವಿಲ್ಲದೆ ಪಂಜಾಬ ಮತ್ತು ವಾಯುವ್ಯ ಗುಂಪಿನಲ್ಲಿ ಜಾತೀಯ ಹಿತಸಂಬಂಧದ ಯಾವ ಪ್ರಶ್ನೆಯೂ ತೀರ್ಮಾನವಾಗಬಾರದೆಂದೂ ಈಗಲೇ ಘಟನಾ ಸಮಿತಿಯವರು ಗೊತ್ತುವಳಿ ಮಾಡಿ ಬಿಡಬೇಕೆಂದು ಕೇಳಲಾಗಿದೆ. ಅಸಾಮುಕ್ಕಂತೂ ಮಹಾತ್ಮರು ಕಾಂಗ್ರೆಸ್ಸನ್ನಾದರೂ ಧಿಕ್ಕರಿಸಿ ಸ್ವಾತಂತ್ರ್ಯವನ್ನುಳಿಸಿಕೊಳ್ಳಿರೆಂದು ಉಪದೇಶಿಸಿದ್ದಾರೆ. ಆದರೆ ಕಾಂಗ್ರೆಸ್ ಗೊತ್ತುವಳಿಯು ಸೌಮ್ಯತೆಯನ್ನು ತೋರಿಸಿದರೆ ಮುಸ್ಲಿಂಲೀಗಿನೊಡನೆ ಒಪ್ಪಂದಕ್ಕೆ ಬರಲು ಇನ್ನೊಂದು ಪ್ರಯತ್ನ ಮಾಡುವಂತೆ ತೋರುತ್ತದೆ. ಅಸಾಮ ಮುಖ್ಯಮಂತ್ರಿ ಗೋಪೀನಾಥ ಬಾರ್ದಲಾಯಿಯವರಾದರೂ ಅ. ಭಾ. ಕಾಂಗ್ರೆಸ್ಸು ಯೋಜನೆಯ ಬ್ರಿಟಿಶ ಅರ್ಥಕ್ಕೊಪ್ಪಿದರೆ ತಾವು ಗುಂಪುಗಳಲ್ಲಿ ಕೂಡುವದಕ್ಕೆ ಒಪ್ಪಬಹುದೆಂಬ ಅಭಿಪ್ರಾಯದ ಹೇಳಿಕೆ ಹೊರಡಿಸಿರುವರು. ಬಂಗಾಲವು ಬಹುಮತದಿಂದ ಅಯೋಗ್ಯ ಘಟನೆಯನ್ನು ಹೊರಿಸಲೆತ್ನಿಸಿದರೆ ಆಗ ಡಿಸೆಂಬರ ೬ ರ ಬ್ರಿಟಿಶ ಹೇಳಿಕೆಯ ಕೊನೆಯ ಪ್ಯಾರಾದ ಪ್ರಯೋಜನ ಪಡೆಯಲವಕಾಶವುಂಟೆಂದು ಅವರ ಮತ. 'ಒಲ್ಲದ ಭಾಗಗಳ ಮೇಲೆ ಯಾವ ಘಟನೆಯನ್ನೂ ಹೊರಿಸುವದಿಲ್ಲ'ವೆಂಬುದರ ಪ್ರಯೋಜನವನ್ನು ಅನುಲಕ್ಷಿಸಿ ಕಾಂಗ್ರೆಸ್ಸು ಅನಿವಾರ್ಯವಾದುದಕ್ಕೆ ತಲೆವಾಗಬಹುದು.

# ಸುಬ್ರಹ್ಮಣ್ಯಂ ದೇಗುಲದಲ್ಲಿ ಹರಿಜನರಿಗೆ ಮುಕ್ತದ್ವಾರ

## ಶ್ರೀ ಕೋಟಿರೆಡ್ಡಿಯವರಿಂದ ಪ್ರಾರಂಭ

ತಮಿಳನಾಡಿನಲ್ಲಿ ಮತ್ತೆರಡು ದೇವಸ್ಥಾನಗಳು ಹರಿಜನರಿಗೆ ತೆರೆಯಲಾದವು.

ಮದ್ರಾಸ ಸರಕಾರದ ಧಾರ್ಮಿಕ [illegible] ಖಾತೆಯ ಮಂತ್ರಿಗಳಾದ ಶ್ರೀ ಕೆ. ಕೋಟಿರೆಡ್ಡಿಯವರು ಹರಿಜನ ಗುಂಪಿನ ಸಮೇತರಾಗಿ "ಅಸ್ಪೃಶ್ಯತೆ ಅಳಿಯಲಿ" "ಮಹಾತ್ಮಾ ಗಾಂಧೀಕೀ ಜೈ" ಎಂಬ ಘೋಷಣೆಯೊಂದಿಗೆ ಅತಿ ಪ್ರಾಚೀನ ದೇವಸ್ಥಾನವಾದ ಶ್ರೀ ಸುಬ್ರಹ್ಮಣ್ಯಂ ದೇವಸ್ಥಾನದಲ್ಲಿ ಪ್ರವೇಶ ಮಾಡಿದರು. ಈ ದೇವಸ್ಥಾನದಲ್ಲಿ ಇಂದಿನ ವರೆಗೆ ಹರಿಜನರ ಪ್ರವೇಶಕ್ಕೆ ಒಪ್ಪಿಗೆ ದೊರೆತಿರಲಿಲ್ಲ. ಈ ಪ್ರದೇಶದ ಸಾವಿರಾರು ಜನರು ದೇವಸ್ಥಾನದ ಮುಂದೆ ನೆರೆದಿದ್ದರು. ಮಂತ್ರಿಗಳೂ ಹರಿಜನ ಬಾಲ ಬಾಲಿಕೆ, ತರುಣ ವೃದ್ಧ, ಸ್ತ್ರೀ ಪುರುಷರೂ ದೇವಸ್ಥಾನದಲ್ಲಿ ಪ್ರವೇಶಿಸುವಾಗ ನೆರೆದ ಜನರು ಜಯಘೋಷಗಳಿಂದ ಸ್ವಾಗತಿಸಿದರು. ಹರಿಜನರು ವಾದ್ಯ ವೈಭವಗಳಿಂದ ದೇವಸ್ಥಾನದಲ್ಲಿ ಪ್ರವೇಶ ಮಾಡಿದರು.

ನಂತರ ನಗರದ ಉತ್ತರ ಭಾಗದಲ್ಲಿರುವ ಶ್ರೀ ಪ್ರಸನ್ನ ವೆಂಕಟೇಶ ದೇವಸ್ಥಾನದಲ್ಲಿ ಅದೇ ಹರಿಜನ ಗುಂಪಿನೊಡನೆ ಬಂದು ಪ್ರವೇಶ ಮಾಡಿದರು. ದೇವಸ್ಥಾನದಲ್ಲಿ ಪ್ರವೇಶ ಮಾಡುವ ಪೂರ್ವದಲ್ಲಿ ದೇವಸ್ಥಾನದ ಎದುರಿಗೆ ಮಂತ್ರಿಗಳು ರಾಷ್ಟ್ರೀಯ ಧ್ವಜವಂದನೆಯನ್ನು ಮಾಡಿದರು.

ಈ ಎರಡೂ ದೇವಸ್ಥಾನಗಳಲ್ಲಿ ಹರಿಜನ ಪ್ರವೇಶದ ದೃಶ್ಯಗಳ ಚಲನಚಿತ್ರತೆಗೆಯಲಾಗಿದೆ. ಮಂತ್ರಿಗಳು ಈ ಎರಡೂ ದೇವಸ್ಥಾನ ಪ್ರವೇಶ ಕಾರ್ಯಕ್ರಮ ಮುಗಿಸಿದ ನಂತರ ಏಳು ವರ್ಷಗಳ ಪೂರ್ವದಲ್ಲಿಯೇ ಹರಿಜನರ ಪ್ರವೇಶಕ್ಕೆ ಅಸ್ಪದ ಸಿಕ್ಕ ಶ್ರೀ ಮೀನಾಕ್ಷಿ ದೇವಸ್ಥಾನಕ್ಕೆ ಭೆಟ್ಟಿ ಕೊಟ್ಟರು.

ಮಂತ್ರಿಗಳು ಸಂಕರಂಕೋಲದಲ್ಲಿ ಮುಂದೆ ಇನ್ನೊಂದು ದೇವಸ್ಥಾನವನ್ನು ಹರಿಜನರಿಗೆ ತೆರೆಯುವ ಸಮಾರಂಭ ನೆರವೇರಿಸಲು ಪ್ರಯಾಣ ಬೆಳಿಸಿದರು. ತಂಜಾವರ ಜಿಲ್ಹೆಯ ತಿರುವರೂರಲ್ಲಿರುವ ಶ್ರೀ ತ್ಯಾಗರಾಜ ದೇವಸ್ಥಾನವು ಅತಿ ಪ್ರಾಚೀನವೂ ಇತಿಹಾಸ ಪ್ರಸಿದ್ಧವೂ ಆಗಿದೆ. ಅದನ್ನು ಹರಿಜನರಪ್ರವೇಶಕ್ಕೆ ನಡುಗಾಲ ಸರಕಾರದ ಕೂಲಿಕಾರ ಮಂತ್ರಿಗಳಾದ ಶ್ರೀ ಜಗಜೀವನ ರಾಮರು ಮದ್ರಾಸಿಕ್ಕೆ ಬಂದಾಗ ತೆರೆಯಲಾಗುವದು. ಶ್ರೀ ಜಗಜೀವನ ರಾಮರಿಗೆ ಆ ದೇವಸ್ಥಾನದಲ್ಲಿ ಹರಿಜನರ ಸಹಿತ ಮೊದಲು ಪ್ರವೇಶ ಮಾಡಿದ ಬಹುಮಾನ ಕೊಡುವ ವಿಚಾರವಿದೆ. ಎಂದು ತಿಳಿಯುತ್ತದೆ.

# ಜಯಪ್ರಕಾಶರ ಪಲಾಯನದ ಆಖ್ಯಾನ

[ ಮೊದಲನೆಯ ಪುಟದಿಂದ ಮುಂದರಿದುದು ]

ಕ್ರಾಂತಿಯೋಜನೆಗೆ ಆದರ್ಶ ಪುರುಷರೆನ್ನಬಹುದು.

## ನೇಪಾಲದ ಸಾಹಸಗಳು

ನೇಪಾಲದಲ್ಲಿ ಜಯಪ್ರಕಾಶರು ನಡೆಸಿದ ಸಾಹಸಗಳು, ಅವರನ್ನು ನೇಪಾಲ ಸರಕಾರ ಅಕಸ್ಮಾತ್ತಾಗಿ ಬಂಧಿಸಿದ್ದು ಮತ್ತು ಅಷ್ಟೇ ಅಕಸ್ಮಾತ್ತಾಗಿ ಅವರು ಅವರಿಂದ ತಪ್ಪಿಸಿಕೊಂಡದ್ದು ದೊಡ್ಡ ರೋಮಾಂಚನಕಾರಿ ಆಖ್ಯಾನವೇ ಆಗಿದೆ. ಬ್ರಿಟಿಶ ಹಿಂದುಸ್ತಾನದಲ್ಲಿ ನಿಂತು ಕಾರ್ಯಸಾಧನೆ ಮಾಡುವದೇ ಅಸಾಧ್ಯವಾದ ಕಾಲವೊಂದು ಬಂದಿತೆಂದು ಅವರು ನನಗೆ ಹೇಳಿದರು. ಕಲಕತ್ತೆಯಿಂದ ನೇಪಾಲದ ಕಡೆಗಿನ ಅವರ ಪಯಣ ರೇಲು ಗಾಡಿ, ಆನೆ, ಕುದುರೆಗಳಿಂದಾಯಿತು. ಕೆಲ ದಿನ ಅಲ್ಲಿ ಅವರೊಬ್ಬ ಜಮೀನುದಾರನ ಅತಿಥಿಗಳಾಗಿ ಉಳಿದುಕೊಂಡರು. ಆ ಮೇಲೆ ಅಡವಿಯಲ್ಲಿ ತಮಗಾಗಿ ಗುಡಿಸಲುಗಳನ್ನು ಕಟ್ಟಿಕೊಂಡರು. ಡಾಕ್ಟರರಾಗಿದ್ದ ಅವರ ಸಂಗಡಿಗರೊಬ್ಬರು ಎಲ್ಲೋ ಒಂದಿಷ್ಟು ಔಷಧಗಳನ್ನು ಸಂಪಾದಿಸಿ ಜನರಿಗೆ ಹಂಚಿದರು. ಆ ಮೇಲೆ ಕ್ರಾಂತಿಕಾರಿ ಚಟುವಟಿಕೆಗಳು ಆರಂಭವಾದವು. ಕೂಟಯೋಧರ ತಂಡಗಳು ಬಂದು ಅವರ ಸಲಹೆಗಳನ್ನು ಕೇಳಿದವು. ಎಲ್ಲ ಕ್ರಾಂತಿಕಾರ ಚಟುವಟಿಕೆಗಳನ್ನು ಏಕತ್ರಿತಗೊಳಿಸಲು "ಆಝಾದ ದಸ್ತಾ" ಎಂಬ ಕೇಂದ್ರ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಸಂಸ್ಥೆ ಬೆಳೆಯಿತು. ಬಿಹಾರದಿಂದ ನೇಪಾಲಕ್ಕೆ ನೂರಾರು ಜನರು ಬಂದು ಅವರ ವಿಮೋಚಕ ಸೈನ್ಯವನ್ನು ಸೇರಿದರು. ನೇಪಾಲ ಸರಕಾರಕ್ಕೆ ಅನೇಕರು ಹೊರಗಿಂದ ಬರುತ್ತಿರುವ ಸಂಗತಿ ಗೊತ್ತಿತ್ತು. ಆದರೂ ಕೆಲ ಕಾಲ ಅದು ಯಾವ ಕ್ರಮವನ್ನೂ ಕೈಗೊಂಡಿದ್ದಿಲ್ಲ. ಮುಂದೆ ಬ್ರಿಟಿಶ ಸರಕಾರದ ಪ್ರೇರಣೆಯಿಂದ ನೇಪಾಲದ ಮಿಲಿಟರಿ ಪೋಲೀಸರು ಜಯಪ್ರಕಾಶರನ್ನೂ ಅವರ ಸಂಗಡಿಗರನ್ನೂ ಬಂಧಿಸಿದರು. ಸ್ವಲ್ಪ ಕಾಲ ಇದು ಕಥೆಯೇ ಮುಗಿದಂತೆ ಕಂಡಿತು. ಆದರೆ ಜಯಪ್ರಕಾಶರ ಪ್ರತ್ಯುತ್ಪನ್ನ ಮತಿಯಿಂದ ಪುನಃ ಚಮತ್ಕಾರಗಳು ಜರಗಿ ಹೋದವು.

ಜಯಪ್ರಕಾಶರನ್ನು ಹನುಮಾನ ನಗರಕ್ಕೆ ಒಯ್ಯುತ್ತಿದ್ದರು. ದಾರಿಯಲ್ಲಿ ಅವರಿಗೊಬ್ಬ ಗೆಳೆಯ ಭೆಟ್ಟಿಯಾದನು. ಅವನೊಡನೆ ಮಾತಾಡುತ್ತಿರುವಷ್ಟರಲ್ಲಿಯೆ ಒಬ್ಬ ಹುಡುಗ ಬಂದು "ಆಹಾ ನಿಮ್ಮನ್ನು ಪಾರು ಮಾಡಲು ಸಾಧ್ಯವಿಲ್ಲವಲ್ಲ" ಎಂದು ಅತ್ತನು. ಜಯಪ್ರಕಾಶರು ಅವನ ಬೆನ್ನು ತಟ್ಟಿ "ಅಳುವದರಿಂದೇನೂ ಫಲವಿಲ್ಲ. ನೀನು ಒಡನೆ ಓಡಿ ಹೋಗಿ ನಮ್ಮ ಕೇಂದ್ರದಲ್ಲಿರುವ ಮುಖ್ಯ ಸೇನಾಪತಿ ಸುರಾಜ ನಾರಾಯಣಗೆ ಹೇಳು, ಕೂಟ ಯೋಧರು ಬಂದು ಪೋಲೀಸರ ಮೇಲೆ ಬೀಳಲಿ!" ಓಡಿದನಾ ಕ್ರಾಂತಿಕಾರ ಬಾಲಕ. ಬೇಕಾದ್ದು ಬಂದರೂ ಮುಂದಾಳನ್ನು ಬಿಡಿಸಿ ತರುವೆವೆಂದು ಕೂಟಯೋಧರ ತಂಡವೊಂದು ಸಿದ್ಧವಾಯಿತು.

## ಪುನಃ ಪಲಾಯನ

ಜಯಪ್ರಕಾಶರನ್ನೂ ಅವರ ಸಂಗಡಿಗರನ್ನೂ ನೇಪಾಲ ಪೋಲೀಸರು ಹನುಮಾನ ನಗರಕ್ಕೆ ತಂದು ಗಾರ್ಡನ ಕೋಣೆಯಲ್ಲಿರಿಸಿದರು. ಕೆಲ ಪ್ರಹರಿಗಳು ಎಚ್ಚರಿದ್ದು ಕಾವಲು ಕೂತರೆ ಉಳಿದವರು ಎಂದಿನಂತೆ ನಿದ್ದೆ ಹೋದರು. ಕೂಟಯೋಧರು ರಾತ್ರಿ ಬಂದರು. ಪೋಲೀಸರ ಲಕ್ಷ್ಯವನ್ನು ಬೇರೆ ಕಡೆ ತಿರುಗಿಸುವ ಸಲುವಾಗಿ ಒಂದೆರಡು ಗುಡಿಸಲುಗಳಿಗೆ ಬೆಂಕಿ ಹಚ್ಚಲಾಯಿತು. ಗುಂಡಿನ ಸದ್ದುಗಳು ಕೇಳಿಸಿದವು. ಇದೆಲ್ಲ ಏನೆಂದು ಗೊತ್ತಿದ್ದೂ ಜಯಪ್ರಕಾಶರು ಕಪ್ಪಗೆ ಮಲಗಿದ್ದರು. ಕೂಟಯೋಧರು ಪಂಕ್ತಿಗಳನ್ನೆಲ್ಲ ಕತ್ತರಿಸಿ ಕಾಟ ಮುಂದುವರಿಗೆ ಬೇಗನೆ ಸುದ್ದಿ ತಲಪದಂತೆ ಮಾಡಿದ್ದರು. ಗುಂಡಿನ ಸದ್ದು ಕೇಳಿ ಮಲಗಿದ್ದ ಸ್ಥಾನಿಕ ಪೋಲೀಸರಿಗೆ ಎಚ್ಚರವಾಯಿತು.

ಖಜಾನೆಯನ್ನು ಕೊಳ್ಳೆ ಹೊಡೆಯಲು ಯಾರೋ ಬಂದಿರುವರೆಂದು ಬಗೆದು ಅವರು ತಮ್ಮ ಕೋವಿಗಳಿಗೆ ಕೈಹಚ್ಚುವ ಮೊದಲೇ ಜಯಪ್ರಕಾಶರ ಕೂಟಯೋಧರು ಅವರನ್ನು ಮುತ್ತಿ ನಿರುಪಾಯರನ್ನಾಗಿ ಮಾಡಿ ಅವರ ಕೋವಿಗಳನ್ನು ಕಸಿದುಕೊಂಡರು. ಒಬ್ಬ ಕಾವಲುಗಾರನು ಅಪಾಯಕರನಾಗಿ ತೋರಿದ್ದರಿಂದ ಅವನನ್ನು ಗುಂಡಿನಿಂದ ಸುಟ್ಟು ಹಾಕಬೇಕಾಯಿತು. ಇದರಿಂದ ಜಯಪ್ರಕಾಶರಿಗೆ ವ್ಯಥೆಯಾಗದಿರಲಿಲ್ಲ. ಆದರೆ ಬೇರೆ ಹಾದಿಯೆ ಇದ್ದಿಲ್ಲ. ಈ ಕಾವಲುಗಾರನ ಕುಟುಂಬದ ಪೋಷಣೆಗೆ ಜಯಪ್ರಕಾಶರು ಯೋಗ್ಯ ವ್ಯವಸ್ಥೆ ಮಾಡಿರುವರೆಂದು ತಿಳಿಯುತ್ತದೆ.

ಈ ಪ್ರಚಂಡ ಸಾಹಸದ ನಂತರ ಜಯಪ್ರಕಾಶರೂ ಅವರ ಸಂಗಡಿಗರೂ ನೇಪಾಲದಿಂದ ಹೊರಗೆ ಧಾವಿಸಿದರು. ನಡೆಯುತ್ತ ಅಷ್ಟು, ಎತ್ತಿನ ಬಂಡಿಯಿಂದ ಅಷ್ಟು ಸಾಗಿ ಅವರು ದರ್ಭಂಗಕ್ಕೂ ಅಲ್ಲಿಂದ ಭಾಗಲಪುರಕ್ಕೂ ಬಂದರು. ಆ ಮೇಲೆ ಕಲಕತ್ತೆಗೆ ಜಯಪ್ರಕಾಶರು ಹೋದರು. ದಾರಿಯಲ್ಲಿ ಪುನಃ ಅವರನ್ನು ಸುತ್ತುಹಾಕಿದರೂ ಸುಲಭವಾಗಿ ಜಾರಿಕೊಳ್ಳಲು ಸಾಧ್ಯವಾಯಿತು. ನೇಪಾಲದಲ್ಲಿ ತಮ್ಮ ಕೂಟಯೋಧರು ತೋರಿಸಿದ ಧೈರ್ಯಪ್ರತಾಪಗಳಿಗೆ ಜಯಪ್ರಕಾಶರು ಮನಸೋತಿದ್ದಾರೆ.

ಈಚೆಗೆ ಜಯಪ್ರಕಾಶರು ನೇಪಾಲದ ಮಹಾರಾಜರಿಗೊಂದು ಪತ್ರ ಬರೆದು ಇದೇ ಘಟನೆಯನ್ನು ವಿವರಿಸಿದ್ದಾರೆ. ತಮಗೆ ನೇಪಾಲ ರಾಜ್ಯ ವಿರುದ್ಧ ಯಾವ ದುರಭಿಪ್ರಾಯವೂ ಇದ್ದಿಲ್ಲವೆಂದೂ ಕೇವಲ ಬ್ರಿಟಿಶ ರಾಜ್ಯದ ವಿರುದ್ಧ ಪರಿಣಾಮಕಾರಿಯಾಗಿ ಹೋರಾಟ ಸಾಗಿಸಲು ತಾವು ಹಾಗೆ ಮಾಡಬೇಕಾಯಿತೆಂದೂ ತಿಳಿಸಿದ್ದಾರೆ. ಜಯಪ್ರಕಾಶರು ನೇಪಾಲದಲ್ಲಿ ಎರಡು ತಿಂಗಳ ಕಾಲ ಇದ್ದರು. ಅಲ್ಲಿಂದಲೆ ಹೋರಾಟ ಸಾಗಿಸುವದು ಅವರ ಉದ್ದೇಶವಾಗಿತ್ತು. ಆದರೆ ಅದು ಸಾಧ್ಯವಾಗದ್ದರಿಂದ ಬ್ರಿಟಿಶ ಹಿಂದುಸ್ತಾನಕ್ಕೆ ಮರಳಿ ಅಲ್ಲಿಂದಲೆ ಹೋರಾಟ ಸಾಗಿಸಬೇಕಾಯಿತು.

## ವಿಶ್ವಾಸಘಾತ

ಈಗ ನಾನು ಜಯಪ್ರಕಾಶರ ಬಂಧನದ ನಿಟ್ಟಿಗೆ ಬರಬೇಕಾಗಿದೆ. ಅದಕ್ಕಾಗಿ ವ್ಯಸನಪಡಬೇಕಾದ ಪ್ರಸಂಗವೇನೂ ಇಲ್ಲ. ಸರಕಾರ ಅವರನ್ನು ಬಂಧಿಸಿದ್ದರಲ್ಲೇನೂ ಆಶ್ಚರ್ಯವಿಲ್ಲ. ಅಷ್ಟು ಕಾಲ ಬ್ರಿಟಿಶ ಸರಕಾರದ ಇಡೀ ಯಂತ್ರವನ್ನೇ ವಂಚಿಸಿ ಅವರು ಹೊರಗುಳಿದದ್ದೇ ಆಶ್ಚರ್ಯ. ತನ್ನ ವಿಶ್ವಾಸಕ್ಕೆ ಪಾತ್ರರಾದವರಲ್ಲೊಬ್ಬರು ವಿಶ್ವಾಸಘಾತ ಮಾಡುವದು ಎಲ್ಲ ಕ್ರಾಂತಿಕಾರರಿಗೂ ದೊರೆಕೊಂಡ ವಿಧಿ. ಕ್ರಾಂತಿಯ ಹಂಚಿಕೆ ಹಾಕುತ್ತಿದ್ದಾಗಲೆ ಸಂಗಡಿಗರಲ್ಲೊಬ್ಬನು ಲೆನಿನ್ನನಿಗೆ ದ್ರೋಹಬಗೆದಿರಲಿಲ್ಲವೆ? ಜಯಪ್ರಕಾಶರ ಸಂಗಡಿಗರಲ್ಲೊಬ್ಬರು ಅವರಿಗೆ ದ್ರೋಹ ಬಗೆದಿದ್ದರೆ ಆಶ್ಚರ್ಯವೇನು?

"ನಿಮ್ಮನ್ನು ಹೇಗೆ ಬಂಧಿಸಿದರು?" ನಾನು ಕೇಳಿದೆ.

"ಊರಿಂದೂರಿಗೆ ಅಲೆಯುತ್ತಿದ್ದ ನನ್ನನ್ನು ಬಂಧಿಸುವದು ಸುಲಭವಲ್ಲವೆಂದು ನನ್ನ ಒಳಮನಸಿನಲ್ಲಿ ಒಂದು ಭಾವನೆ ಬೇರೂರಿ ಬಿಟ್ಟಿತು. ಆದುದರಿಂದ ನಾನು ಜಾಗರೂಕತೆಯನ್ನು ಸ್ವಲ್ಪ ಕಡಿಮೆ ಮಾಡಿದ್ದೆ. ಅಲ್ಲದೆ ನಮ್ಮ ದಿಲ್ಲಿ ಸಂಸ್ಥೆ ತುಸು ಅಚತುರವಾಗಿ ಬಿಟ್ಟದ್ದರಿಂದ ನಾನು ಸಿಕ್ಕಿಬಿದ್ದೆ."

ಜಯಪ್ರಕಾಶರು ಕಲಕತ್ತೆಯಿಂದ ಕಾಶ್ಮೀರಕ್ಕೆ ಹೊರಟಿದ್ದರು. ಕಲಕತ್ತೆಯಿಂದ ದಿಲ್ಲಿಗೆ ಬರಲು ಅವರಿಗೆ ಎಷ್ಟೋ ದಿನ ಹಿಡಿಯಿತು. ಪೋಲೀಸರಿಗೆ ದುಂಕುಬೂದಿ ಹಚ್ಚಲು ಅವರು ... ಅಡ್ಡತಿದ್ದ ದಾರಿಗಳಿಂದ ಹೋಗಬೇಕಾಗಿತ್ತು. ದಿಲ್ಲಿಯಿಂದ ಅವರು ಸಪ್ಟೆಂಬರ ೧೮, ೧೯೪೩ ನೆ ದಿನ ಪೇಶಾವರಕ್ಕೆ ಹೋಗಿ...

...ಯಿತು. ಸೆಪ್ಟೆಂಬರ ೧೮ ಮುಂಜಾನೆ ... ಸರ ನಿಲ್ದಾಣಕ್ಕೆ ಬಂದೊಡನೆ ಜಯಪ್ರಕಾಶರು ಚಹಾ ಬೇಡುವ ಸಲುವಾಗಿ ತಮ್ಮ ಡಬ್ಬಿಯ ಕಿಡಿಕಿಗೆ ಬಂದರು. ಅಷ್ಟರಲ್ಲಿ ಯಾರೋ ಬಾಗಿಲು ಬಡಿದರು. ಆ ಡಬ್ಬಿಯಲ್ಲಿ ಇನ್ನೂ ಮೂರು ಆಸನಗಳು ತೆರವಿದ್ದುದರಿಂದ ಬಂದವರು ಪ್ರಯಾಣಿಕರಿರಬೇಕೆಂದು ಬಗೆದ ಜಯಪ್ರಕಾಶರು ಕಿಡಕಿಯಲ್ಲಿ ತಲೆ ಹಾಕಿ ಒಳಗೆ ಬರಹೇಳಿದರು. ಅವರು ಅತ್ತಿತ್ತ ನೋಡತೊಡಗಿದರೇ ಹೊರತು ಒಳಗೆ ಬರಲಿಲ್ಲ. ಅವರ ಹತ್ತಿರ ಸಾಮಾನುಗಳೇನೂ ಇದ್ದಿಲ್ಲ. ಅವರ ಮುಖಗಳನ್ನು ಕಣ್ಣಿಟ್ಟು ನೋಡಿದಾಗ ಜಯಪ್ರಕಾಶರಿಗೆ ಅವರ ಸಂಶಯ ಬಂದಾಯಿತೆಂದು ಗೊತ್ತಾಯಿತು. ಪೋಲೀಸರ ಬಲೆಯಲ್ಲಿ ಅವರು ಸಿಕ್ಕಿಬಿದ್ದಿದ್ದರು. ಒಬ್ಬ ಇಂಗ್ಲೀಷ ಮನುಷ್ಯನು ಕೆಲ ಸೀಖರ ಸಂಗಡ ಎಚ್ಚರಿಕೆಯಿಂದ ಡಬ್ಬಿಯಲ್ಲಿ ಪ್ರವೇಶಿಸಿದನು. ಸುತ್ತಲೂ ಸಂಶಯ ಚಿತ್ತದಿಂದ ನೋಡಿ ಕೇಳಿದನಾತ: "ನಿಮ್ಮ ಹೆಸರೇನು?"

"ನೀವು ರೇಲ್ವೆ ಅಧಿಕಾರಿಗಳೇ?"

"ಅಲ್ಲ. ನಾನು ರೇಲ್ವೆ ಅಧಿಕಾರಿ ಅಲ್ಲ. ಆದರೆ ನಿಮ್ಮ ಹೆಸರು ಬೇಕಾಗಿದೆ," ಆತನು ಸಿಟ್ಟಿನಿಂದಲೇ ಉತ್ತರವಿತ್ತ.

ಜಯಪ್ರಕಾಶರು ತಮ್ಮ ಹೆಸರು ... ಮೆಹತಾ ಎಂದು ಹೇಳಿದರು. ಪೋಲೀಸ ... ಕಾಗಿ ಇದಿ ಡಬ್ಬಿಯನ್ನು ಶೋಧಿಸಿ ... "ನಿಮ್ಮನ್ನು ಶೋಧಿಸಬೇಕಾಗಿದೆ" ಎಂದ. ಆದರೆ ಶೋಧದಲ್ಲಿ ಏನೂ ಹೊರಡಲಿಲ್ಲ.

ಈ ಶೋಧ ಮಾಡಿದ ಮನುಷ್ಯನ ಹೆಸರು ವಿಲಿಯಂ ರಾಬಿನ್ಸನ್, ಲಾಹೋರದ ಪೋಲೀಸ ಸುಪರಿಂಟೆಂಡೆಂಟ. ಜಯಪ್ರಕಾಶರ ಹತ್ತಿರ ಬಂದೂಕಿಲ್ಲದ್ದು ನೋಡಿ ಅವನಿಗೆ ಆಶ್ಚರ್ಯವಾಯಿತು. ತೊಂದರೆ ಕೊಟ್ಟರೆ ಜಯಪ್ರಕಾಶರನ್ನು ಗುಂಡಿಕ್ಕಿ ಕೊಲ್ಲುವ ಅಧಿಕಾರ ಕೂಡ ಅವನಿಗೆ ಕೊಡಲ್ಪಟ್ಟಿತ್ತು. ಜಯಪ್ರಕಾಶರನ್ನು ಹಿಡಿದವರಿಗೆ ಜಾಹೀರು ಮಾಡಿದ್ದ ಬಹುಮಾನ ಅವನಿಗೆ ಸಿಕ್ಕಿತು. ಅಲ್ಲದೆ ದಿಲ್ಲಿಯ ಸೀನಿಯರ ಸುಪರಿಂಟೆಂಡೆಂಟ ಕೆಲಸಕ್ಕೆ ಅವನಿಗೆ ಬಡತಿಯಾಯಿತು.

ಜಯಪ್ರಕಾಶರಿಗೆ ಬಹಳ ವ್ಯಥೆಯಾಯಿತು. ಬಂಧನವಾದುದಕ್ಕಲ್ಲ ಹೊರಗುಳಿದು ಹೋರಾಟವನ್ನು ಸಾಗಿಸಲಾರದೆ ಹೋದೆನಲ್ಲ, ಎಂದು.

## ಚಿತ್ರಹಿಂಸಾ ಗುಹೆಗೆ

ಅವರನ್ನು ಹಿಡಿಯಲು ಬಂದಿದ್ದ ಇಂಗ್ಲೀಷ ಅಧಿಕಾರಿಯೂ ಸೀಖ ಪೋಲೀಸರೂ ... ಗಳನ್ನು ತಂದಿರಲಿಲ್ಲ. ಜಯಪ್ರಕಾಶರ ... ನುಗಳನ್ನು ಕಟ್ಟಿದ ಚರ್ಮದ ಪಟ್ಟಿಯಿಂದ ಅವರ ಕೈಗಳನ್ನು ಬಿಗಿದರು. ಅವರನ್ನೊಂದು ಕಾರಿನಲ್ಲಿ ತುರುಕಿ ಲಾಹೋರು ಕೋಟೆಯ ... ಮನೆಯಲ್ಲಿ ಅನಂತಯಾತನೆಯನ್ನನುಭವಿಸಲು ... ಕಳಿಸಲಾಯಿತು. ಆ ಚಿತ್ರಹಿಂಸಾ ಗುಹೆಯಿಂದ ಆಗ್ರಾ ಕೇಂದ್ರ ಸೆರೆಮನೆಗೆ ಅವರು ... ನರಕಯಾತನೆ ... ವರ್ಗಾಯಿಸಲ್ಪಟ್ಟರು.



...ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರ ... ಹರಿಯವರಿಂದ ಮುದ್ರಿಸಲ್ಪಟ್ಟಿತು ... ಕಟವಾಯಿತು.